# ಸಿರಿಭೂವಲಯ
# ಕೆ. ಅನಂತಸುಬ್ಬರಾಯರು ಕಂಡಂತೆ

ಸಂಗ್ರಹ : ಎನ್. ಪ್ರಭಾವತಿ















# ಸಿರಿಭೂವಲಯ
# ಕೆ. ಅನಂತ ಸುಬ್ಬರಾಯರು ಕಂಡಂತೆ





*ಸಂಗ್ರಹ*

**ಎಸ್. ಪ್ರಭಾವತಿ**




*ಪ್ರಕಾಶಕರು:*

ಪುಸ್ತಕಶಕ್ತಿ ಪ್ರಕಾಶನ
ನಂ. 103, 3ನೇ ಮುಖ್ಯ ರಸ್ತೆ, 2ನೇ ಷಾಪ್ ಲೈನ್, ಟಾಟಾ ಸಿಲ್ಕ್ ಫಾರಂ,
ಬಸವನಗುಡಿ, ಬೆಂಗಳೂರು - 560 004
e-mail : info@pustakshakti.com, pustakshakti@yahoo.com
website: www.pustakshakti.com
Phone: (off): +9180-26915917, Mobile : +91 9448733323, 9972129376

**ಸಿರಿಭೂವಲಯ ಕೆ. ಅನಂತಸುಬ್ಬರಾಯರು ಕಂಡಂತೆ:**

ಸಂಗ್ರಹ: ಎನ್. ಪ್ರಭಾವತಿ, ನಂ. 97, ಪೂರ್ಣಪ್ರಜ್ಞಾ ಲೇಔಟ್, ಬಿ.ಎಸ್.ಕೆ. 3ನೇ ಹಂತ, ಬೆಂಗಳೂರು, ಮೊಬೈಲ್ : 99808 95209, ಪ್ರಕಾಶಕರು: ಪುಸ್ತಕ ಶಕ್ತಿ ಪ್ರಕಾಶನ, ನಂ. 103, 3ನೇ ಮುಖ್ಯ ರಸ್ತೆ, 2ನೇ ಷಾಪ್ ಲೈನ್, ಟಾಟಾ ಸಿಲ್ಕ್ ಫಾರಂ, ಬಸವನಗುಡಿ, ಬೆಂಗಳೂರು-04. ಫೋನ್: 9180-26915917, ಮೊಬೈಲ್: + 91 9448733323, 9972129376

ಪುಟಗಳು : xv+ 3+ 93 = 111

ಚಿತ್ರಪುಟಗಳು : 3



ಪ್ರಥಮಮುದ್ರಣ : 2007

ಪ್ರತಿಗಳು : 1000

ಬೆಲೆ : ಸಾದಾ ಪ್ರತಿ ರೂ. **80/-**
ಕ್ಯಾಲಿಕೋ ಪ್ರತಿ ರೂ. **100/-**

ಪುಸ್ತಕ ಅಳತೆ : 1/8 ಡೆಮ್ಮಿ

ಕಾಗದದ ಬಳಕೆ : 70 ಜಿ.ಎಸ್.ಎಂ. ಮ್ಯಾಪ್ಲಿಥೋ

ಮುಖಪುಟ ವಿನ್ಯಾಸ : ಶ್ರೀ ವೈ.ಕೆ. ಮೋಹನ್

ಅಕ್ಷರಜೋಡಣೆ : ಶ್ರೀ ಆನಂದ್, ಮೊ : 9342196255

ಮುದ್ರಣ : ಪೂರ್ಣಿಮ ಪ್ರಿಂಟರ್ಸ್, ಚಾಮರಾಜಪೇಟೆ, ಬೆಂಗಳೂರು-18
ಮೊ. 9341931668



**SIRI BHOOVALAYA K. ANANTHA SUBBARAYARU KANDANTHE :**

Text Collected by : Kum. N. Prabhavathi, # 97, Poornaprajna Layout, BSK 3rd Stage, Bangalore. Mobile : 9980895209. Publisher : **Pustak Shakti,** No. 103, 3rd Main, 2nd Shop Lane, Tata Silk Farm, Basavanagudi, Bangalore-04. Phone: (off): +9180-26915917, Mobile : +91 9448733323, 9972129376

**ISBN : 978-81-903572-7-2**

Pages: xv+ 3 + 93 = 111

Photograph pages: 3



First Edition : 2007

Copies : 1000dâ

Price : Regular Copy **Rs. 80/-**
Calico Copy **Rs. 100-00**

Coverpage Design : Sri Y.K. Mohan

Graphics : K.N. Shekar, Data Print, Bangalore

Type Setting by : Sri Anand, Cell : 9342196255

Printed at : Poornima Printers, Chamarajapet, Bangalore-18
Phone : 080-32924462, Cell : 9341931668

# ಪರಿವಿಡಿ

# ಪ್ರಕಾಶಕರು ಮಾತು

"ಶ್ರೀಯುತ ಕೆ. ಅನಂತ ಸುಬ್ಬರಾಯರು ಜಠರ ತೊಂದರೆಗೆ ಶಸ್ತ್ರ ಚಿಕಿತ್ಸೆಗೆ ಆಸ್ಪತ್ರೆ ಸೇರಿದ್ದಾರೆ. ಕೊನೆಯ ದಿನಗಳು, ಶಸ್ತ್ರ ಚಿಕಿತ್ಸೆಗೆ ಒಪ್ಪಿಗೆ ಸೂಚಿಸಿದ ನಂತರ, ನಿತ್ರಾಣದಿಂದ ಕ್ಷೀಣಗೊಂಡಿದ್ದ ತಮ್ಮ ಧ್ವನಿಗೆ ಪ್ರಯತ್ನ ಪೂರ್ವಕವಾಗಿ ಶಕ್ತಿ ತುಂಬಿ...' ಗುರುವೇ ನನ್ನ ಕಾಲ ಮುಗಿಯಿತು, ಹೊರಡಲು ಸಿದ್ಧನಿದ್ದೇನೆ. ಚಿಂತೆಯೇನಿಲ್ಲ, ಆದರೆ ಮೈಸೂರಿನಲ್ಲಿ ನಡೆಯುವ ವಿಶ್ವ ಕನ್ನಡ ಸಮ್ಮೇಳನದಲ್ಲಿ ನಿಮ್ಮ ನೆರವಿನಿಂದ ಕೊನೆಯ ಸಲ ಸಿರಿಭೂವಲಯದ ಸೇವೆ ಸಲ್ಲಿಸಿಬಿಟ್ಟರೆ ನನ್ನ ಕೆಲಸ ಮುಗಿಯುತ್ತದೆ, ಅಷ್ಟು ಕಾರ್ಯ ಮಾಡಲು 2-3 ತಿಂಗಳ ಕಾಲ ನನಗೆ ಹೆಚ್ಚಿನ ಆಯಸ್ಸು ಬೇಕು. ದಯವಿಟ್ಟು ಕೂಡಲೇ ಕಾರಂತರಿಗೆ ಪತ್ರ ಹಾಕಿ ನನ್ನ ಪ್ರಾರ್ಥನೆ ತಿಳಿಸು, ಅವರು ಸಿದ್ಧ ಪುರುಷರು, ಅವರು ಪ್ರಾರ್ಥಿಸಿದರೆ ಸರ್ವಶಕ್ತನು ಕರುಣಿಸುತ್ತಾನೆ. ನನ್ನ ಆಸೆ ಪೂರೈಸುತ್ತದೆ. ಎಂದು ತಮ್ಮ ಅಂತರ್ಯವನ್ನು ನನ್ನಲ್ಲಿ ಸೂಚಿಸಿದರು" (ಸುಧಾರ್ಥಿ ಅನಂತ) ಈ ವಾಕ್ಯಗಳನ್ನು ಸುಧಾರ್ಥಿಯವರು. ಹಾಸನದಲ್ಲಿ ಭೇಟಿಯ ವೇಳೆ ನನಗೆ ತಿಳಿಸಿದರು. ಎಂಥ ಮನಮಿಡಿಯುವ ಮಾತುಗಳು ಭೂವಲಯದ ಬಗ್ಗೆ ಇದ್ದ ಪ್ರೀತಿ ಮತ್ತು ಕಾಳಜಿ.

ಪುಸ್ತಕ ಶಕ್ತಿ ಸಿರಿಭೂವಲಯ ಪ್ರಕಟಣೆ ಕಾರ್ಯ ಕೈಗೊಂಡು ದಿನದಿಂದಲೂ ಭೂವಲಯದ ಸಂಶೋಧಕರೂ ಪ್ರಚಾರಕರೂ ಸೇವಕರೂ ಎಂದೇ ಸೇವೆಗೈದ ಪೂರ್ವಸೂರಿ ಪ್ರಮುಖರಾದ ತ್ರಿಮೂರ್ತಿಗಳಲ್ಲಿ ದಿ|| ಕೆ. ಅನಂತ ಸುಬ್ಬರಾಯರು ಒಬ್ಬರು. ಇನ್ನಿಬ್ಬರು ಪಂ| ಎಲ್ಲಪ್ಪ ಶಾಸ್ತ್ರಿಗಳು ಮತ್ತು ಕರ್ಲಮಂಗಲಂ ಶ್ರೀಕಂಠಯ್ಯನವರು ಇವರು ತಮ್ಮ ಜೀವನದಲ್ಲಿ ಕೈಗೊಂಡ ಸಿರಿಭೂವಲಯ ಸಂಶೋಧನೆಯ ಬಗ್ಗೆ ಒಂದು ಪುಸ್ತಕವನ್ನು ಹೊರತರುವ ಬಗ್ಗೆ ಚಿಂತನೆ ನಡೆಯುತ್ತಲೇ ಇತ್ತು. ಇದು ಕಾರ್ಯರೂಪಕ್ಕೆ ಬಂದದ್ದು, ನಮ್ಮ ಕಾರ್ಯಾಲಕ್ಕೆ ಕು|| ಎನ್. ಪ್ರಭಾವತಿಯರು ಬಂದು ಈ ವಿಷಯವನ್ನು ಪ್ರಸ್ತಾಪಿಸಿ, ತಮಗೆ ಕೆಲವು ಮಾಹಿತಿಗಳು ಬೇಕೆಂದಾಗ, ಅವರ ಉದ್ದೇಶ ಹಿಡಿಸಿ ಸಂತೋಷದಿಂದ ಇದ್ದ ಮಾಹಿತಿಗಳನ್ನು ಅವರಿಗೆ ಒಪ್ಪಿಸಿ ಪುಸ್ತಕ ರೂಪಕ್ಕೆ ತನ್ನಿ ಪ್ರಕಟಣೆ ಮಾಡುವೆ ಎಂದು ಸಂತೋಷದಿಂದ ತಿಳಿಸಿದೆ. ಇದರ ಫಲವೇ ಈ ಹೊತ್ತಿಗೆ ಹೊರಬರಲು ಕಾರಣ. ಈ ಕೆಲಸ ಬಹಳ ಹಿಂದೆಯೇ ನಡೆಯಬೇಕಿತ್ತು. ದಿ|| ಕೆ. ಅನಂತ ಸುಬ್ಬರಾಯರದು ಬಹುಮುಖ ಪ್ರತಿಭೆ, ಕನ್ನಡ ಕೀ ಬೋರ್ಡ್‌ನ ಜನ್ಮದಾತ ಮಾತ್ರವಲ್ಲದೆ, ಅವರು ಒಳ್ಳೆಯ ಉಪಾಧ್ಯಾಯರು, ಛಾಯಾ ಚಿತ್ರಗ್ರಾಹಕರು, ಪತ್ರಿಕೋದ್ಯಮ, ಸ್ವಾತಂತ್ರ್ಯ

ಹೋರಾಟಗಾರರು, ಪತ್ರಿಕಾ ವರದಿಗಾರರು, ಶೀಘ್ರಲಿಪಿಗಾರರು ಮತ್ತು ಸಂಶೋಧಕಾರರು ಹಾಸನ ಪತ್ರಿಕೆ ಸಂಪಾದಕರು ಹಾಗೂ ಪ್ರಕಟಣಗಾರರು ಕೂಡ. ಇವರು ಸಿರಿಭೂವಲಯದ ಬಗ್ಗೆ ಮಾಡಿರುವ ಸಂಶೋಧನೆ ಅಗಾಧ. ಭೂವಲಯದ ಬಗ್ಗೆ ಕೊನೆಯ ಉಸರಿನವರೆಗೂ ಚಿಂತಿಸಿದ್ದಾರೆ, ದುಡಿದಿದ್ದಾರೆ. ಈ ಸಂಶೋಧನೆಗಳನ್ನು ಕು|| ಎನ್. ಪ್ರಭಾವತಿಯವರು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ದಾಖಲಿಸಿದ್ದಾರೆ. ಇದೊಂದು ಸಾಹಸ ಕಾರ್ಯ ಪುಸ್ತಕ ಶಕ್ತಿ ಎನ್. ಪ್ರಭಾವತಿಯವರನ್ನು ಹೆಮ್ಮೆಯಿಂದ ಅಭಿನಂದಿಸುತ್ತದೆ. ಈ ಪುಸ್ತಕವು ದಿ|| ಕೆ. ಅನಂತ ಸುಬ್ಬರಾಯರ ಜನ್ಮ ಶತಮಾನ ವರ್ಷದಲ್ಲಿ ಸಿರಿಭೂವಲಯ ಅಭಿಮಾನಿಗಳಿಗೆ, ಓದುಗರಿಗೆ, ಸಂಶೋಧಕರ ಕೈಸೇರುತ್ತಿರುವುದು ಸಂತೋಷದ ವಿಷಯ.

ಬೆನ್ನುಡಿಯಿಂದ ಈ ಹೊತ್ತಿಗೆಗೆ ವಿಶೇಷ ಮೌಲ್ಯ ದೊರಕಿಸಿದ ಪ್ರೊ|| ನಾ. ಗೀತಾಚಾರ್ಯರವರಿಗೆ, ಮುನ್ನುಡಿಯಿಂದ ಆಶೀರ್ವದಿಸಿದ ಪ್ರೊ|| ಧ್ರುವ ನಾರಾಯಣರವರಿಗೆ, ನಲ್ನುಡಿಯನು ಬರೆದಿರುವ ಪ್ರೊ|| ಪ್ರಣತಾರ್ತಿ ಹರನ್ ಅವರಿಗೆ ನನ್ನ ಪ್ರಥಮ ಕೃತಜ್ಞತೆಗಳು. ಈ ಕಾರ್ಯವನ್ನು ಪುಸ್ತಕ ರೂಪಕ್ಕೆ ಹೊರತರಲು ಶ್ರಮಿಸಿದ ಪುಸ್ತಕ ಶಕ್ತಿ ಪರಿಣಿತ ಕುಟುಂಬಕ್ಕೆ ನನ್ನ ವಂದನೆಗಳು.

ವೈ.ಕೆ. ಮೋಹನ್
ಪುಸ್ತಕ ಶಕ್ತಿ ಪ್ರಕಾಶನ

# ಒಂದು ಮಾತು

ಸಿರಿಭೂವಲಯದ ಬಗ್ಗೆ ನನಗೆ ಆಸಕ್ತಿ ಬರಲು ಪ್ರಮುಖವಾಗಿ ಕಾರಣರಾದವರು ಶ್ರೀ ವೈ.ಕೆ. ಮೋಹನ್‌ರವರು ಒಮ್ಮೆ ಗೌರಿಬಿದನೂರಿನ ಒಂದು ಸಮಾರಂಭದಲ್ಲಿ ವ್ಯಕ್ತಿ ಪರಿಚಯ ಕಾರ್ಯಕ್ರಮದ ಒಂದು ಸಂದರ್ಭದಲ್ಲಿ ಪುಸ್ತಕ ಶಕ್ತಿ ಪ್ರಕಾಶನದ ಸಂಸ್ಥೆಯ ಬಗ್ಗೆ ಮತ್ತು ಸಿರಿಭೂವಲಯದ ಗ್ರಂಥದ ಬಗ್ಗೆ ವಿವರಣೆಯನ್ನು ನೀಡಿದರು.

ಕೂತೂಹಲದಿಂದ ಹೆಚ್ಚಿನ ಮಾಹಿತಿಗಾಗಿ ಪುಸ್ತಕದ ಶಕ್ತಿ ಪ್ರಕಾಶನದ ಕಛೇರಿಗೆ ಭೇಟಿಯಿತ್ತು, ನನಗೆ ಉಂಟಾದ ಆಸಕ್ತಿಯನ್ನು ವಿವರಿಸಿ ಹೇಳಿದೆ. ನನ್ನ ಆಸಕ್ತಿಯನ್ನು ಕಂಡು "ಸಿರಿಭೂವಲಯ ಭಾಗ-2" ರಲ್ಲಿ ನನಗೆ ತಿದ್ದುಪಡಿ ಕೆಲಸವನ್ನು (ಪ್ರೂಫ್ ರೀಡಿಂಗ್) ಮಾಡಲು ಅವಕಾಶ ಕಲ್ಪಿಸಿಕೊಟ್ಟರು. ಆನಂತರ ಸಿರಿಭೂವಲಯ ಗ್ರಂಥದ ಬಗ್ಗೆ ಆಸಕ್ತಿ ಹೆಚ್ಚಾಗಿ ಶ್ರೀ ವೈ.ಕೆ. ಮೋಹನ್‌ರವರ ಸಹಾಯದಿಂದ ಕೆ. ಅನಂತ ಸುಬ್ಬರಾಯರು ಸಿರಿಭೂವಲಯದ ಬಗ್ಗೆ ಸಭೆ ಸಮಾರಂಭಗಳಲ್ಲಿ ಹೇಳಿದ ವಿವರಣೆಗಳನ್ನು ಸಚಿತ್ರ ಸಹಿತ "ಸಿರಿಭೂವಲಯ ಕೆ. ಅನಂತ ಸುಬ್ಬರಾಯರು ಕಂಡಂತೆ" ಎಂಬ ಕಿರು ಹೊತ್ತಿಗೆಯನ್ನು ಅವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲೇ ಲೋಕಾರ್ಪಣೆಗೊಳ್ಳುತ್ತಿರುವುದು ನನಗೆ ತುಂಬಾ ಸಂತೋಷವಾಗಿದೆ.

"ಸಿರಿಭೂವಲಯ" ಗ್ರಂಥದಲ್ಲಿರುವ ವಿಚಾರಗಳು ಒಂದು ಮಹಾಸಾಗರವಿದ್ದಂತೆ, ಇದೂವರೆಗೂ ಮಹಾಸಾಗರದಿಂದ ಒಂದು ಬೊಗಸೆಯ ನೀರನ್ನು ಹಿಡಿದಿದ್ದೇವೆ. ಇನ್ನೂ ಅಗಣನೀಯವಾದ ವಿಚಾರಗಳನ್ನು ತಿಳಿಯಲು ಇನ್ನೂ ಹೆಚ್ಚಿನ ಅಧ್ಯಯನ ಮತ್ತು ಸಂಶೋಧನೆಗಳ ಕೆಲಸ ನಡೆಯಬೇಕಾಗಿದೆ, ಇದಕ್ಕಾಗಿ ಆಸಕ್ತರು ಮುಂದೆ ಬರಬೇಕೆಂದು ನನ್ನ ವಿನಂತಿ.

ಸಾಹಿತ್ಯ ಕ್ಷೇತ್ರದಲ್ಲಿ ನಾನು ಇದೀಗ ಬೆಳೆಯುತ್ತಿರುವ ಶಿಶುವಿನಂತೆ ಆದ್ದರಿಂದ ತಾವು ಈ ಕಿರು ಹೊತ್ತಿಗೆಯಲ್ಲಿ ಯಾವುದೇ ತಪ್ಪು ಒಪ್ಪುಗಳಿದ್ದರೆ ನನ್ನನ್ನು ಕ್ಷಮಿಸಿ ಮುನ್ನಡೆಸಬೇಕೆಂದು ಪ್ರಾರ್ಥನೆ.

ಸಿರಿಭೂವಲಯ ಗ್ರಂಥದ ಪ್ರಚಾರಕ್ಕೆ ಮತ್ತು ಪ್ರಕಟಣೆಗಾಗಿ ಅಪಾರ ಶ್ರಮವಹಿಸಿ ದುಡಿಯುತ್ತಿರುವ ಪುಸ್ತಕ ಶಕ್ತಿ ಪ್ರಕಾಶನದ ಸಂಸ್ಥಾಪಕರಾದ ಶ್ರೀ ವೈ.ಕೆ. ಮೋಹನ್‌ರವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಮರ್ಪಿಸುತ್ತಿದ್ದೇನೆ. ಸಾರಸ್ವತ ಲೋಕಕ್ಕೆ ಅಮೂಲ್ಯ ಸೇವೆ ಸಲ್ಲಿಸಿದಂತಹ ಹಾಗೂ ಸಿರಿಭೂವಲಯ ಗ್ರಂಥದ ಬಗ್ಗೆ ಅಪಾರ ಒಲವು ಇರಿಸಿಕೊಂಡಿದ್ದ ದಿ। ಅನಂತ ಸುಬ್ಬರಾಯರಿಗೆ ನನ್ನ ಅನಂತಾನಂತ ವಂದನೆಗಳು.

ಈ ಕಿರುಹೊತ್ತಿಗೆಗೆ ಅಭಿಮಾನದಿಂದ ಮುನ್ನುಡಿಯನ್ನು ಬರೆದುಕೊಟ್ಟ ಪ್ರೊ॥ ಎಂ. ಧ್ರುವನಾರಾಯಣ ಅವರಿಗೆ, ಸವಿಯಾದ ನಲ್ನುಡಿಯನ್ನು ಬರೆದುಕೊಟ್ಟ ಪ್ರೊ॥ ಪ್ರಣತಾರ್ತಿ ಹರನ್‌ರವರಿಗೆ ಹಾಗೂ ಸೊಗಸಾದ ಬೆನ್ನುಡಿಯನ್ನು ಬರೆದುಕೊಟ್ಟ ಹಾಗೂ ಈ ಕಾರ್ಯದಲ್ಲಿ ಸಲಹೆ ಸೂಚನೆಗಳನ್ನು ಕೊಟ್ಟು ಸಹಾಯ ಮಾಡಿದ ಪ್ರೊ॥ ನಾ. ಗೀತಾಚಾರ್ಯರವರಿಗೂ ನನ್ನ ವಂದನೆಗಳು.

ನನ್ನ ಎಲ್ಲಾ ಸಂಗ್ರಹ ಕಾರ್ಯಗಳಿಗೆ ಸಹಾಯ ಮಾಡಿದ ಉಮೇಶ್‌ರವರಿಗೆ ಮತ್ತು ಅಚ್ಚುಕಟ್ಟಾದ ಅಕ್ಷರ ಜೋಡಣೆ ಮತ್ತು ಪುಟ ವಿನ್ಯಾಸ ಕಾರ್ಯಕ್ಕೆ ನೆರವಾದ ಆನಂದ್‌ರವರಿಗೂ ಹೃತ್ಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇನೆ ಹಾಗೂ ಕೊನೆಯದಾಗಿ ನನ್ನ ಸಂಗ್ರಹ ಕಾರ್ಯಕ್ಕೆ ಪ್ರೋತ್ಸಾಹಿಸಿ ಸಹಕರಿಸಿದ ಪೋಷಕರಿಗೆ ಮನದುಂಬಿ ವಂದಿಸುತ್ತೇನೆ.

ಮತ್ತೊಮ್ಮೆ ಇಂತಹ ಅಪೂರ್ವ ಗ್ರಂಥದ ಸಂಗ್ರಹಣಾ ಕಾರ್ಯದಲ್ಲಿ ನೆರವು ನೀಡಿದ ಎಲ್ಲ ಮಹನೀಯರಿಗೂ ಹಾಗೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

ಎನ್. ಪ್ರಭಾವತಿ
ಸಂಗ್ರಾಹಕಿ

# ಮುನ್ನುಡಿ

## ಸರ್ವಭಾಷಾಮಯಿ ಸಿರಿಭೂವಲಯ
## ಕನ್ನಡ ಸಾಹಿತ್ಯದ ಮೇರು ಕೃತಿ

ನಾನು ಮದನಪಲ್ಲಿಯ ಅನಿಬೆಸೆಂಟ್ ಥಿಯೋಸೊಫಿಕಲ್ ಕಾಲೇಜಿನ ವಿದ್ಯಾರ್ಥಿ. ಸ್ವಾತಂತ್ರ್ಯ ಪೂರ್ವದಲ್ಲಿದ್ದ ಪರಿಸ್ಥಿತಿಯಲ್ಲಿ ನಮಗೆ ಅಂದರೆ ಬಳ್ಳಾರಿ ಜಿಲ್ಲೆಯವರಿಗೆ ಹೆಚ್ಚಿನ ಅಧ್ಯಯನಕ್ಕಾಗಿ ಎರಡೇ ಕಾಲೇಜುಗಳು ಎಂದರೆ ಒಂದು ಅನಂತಪುರದ ಸರಕಾರಿ ಕಾಲೇಜು. ಮತ್ತೊಂದು ಮದನಪಲ್ಲಿಯ ಥಿಯೋಸಫಿಕಲ್ ಕಾಲೇಜು. ನಾನು ಅಂದಿನ ಎರಡು ವರ್ಷದ ಇಂಟರ್ ಮಿಡಿಯಟ್ ವಿದ್ಯಾಭ್ಯಾಸ ಅಲ್ಲಿಂದಲೇ ಪೂರೈಸಿದೆ. ಈ ಎರಡು ವರ್ಷದ ವ್ಯಾಸಂಗಾವಧಿಯಲ್ಲಿ ಕನ್ನಡ ಸಂಘದ ಕಾರ್ಯಕರ್ತನಾಗಿ ಸೇವೆ ಸಲ್ಲಿಸುವ ಭಾಗ್ಯ ನನಗೆ ಒದಗಿತ್ತು.

ದಿವಂಗತ ತಟ್ಟಸಂದ್ರ ಶ್ರೀಕಂಠಯ್ಯನವರು ನಮಗೆ ಕನ್ನಡ ಪಾಠ ಹೇಳಿದವರು. 1954ರಲ್ಲಿ ರಾಯಚೂರಿನಲ್ಲಿ ಕಾಲೇಜು ಒಂದನ್ನು ತೆರೆಯಲಾಯಿತು. ದಿವಂಗತ ಶ್ರೀಕಂಠಯ್ಯನವರು ಆ ಕಾಲೇಜಿಗೆ ಕನ್ನಡ ಪ್ರಾಧ್ಯಾಪಕರಾಗಿ ಬಂದು ಸುಮಾರು ಮೂವತ್ತು ವರ್ಷ ಸೇವೆ ಸಲ್ಲಿಸಿದರು. ಯೋಗಾಯೋಗ ಎಂಬಂತೆ ನಾನೂ 1958ರಲ್ಲಿ ರಾಜ್ಯಶಾಸ್ತ್ರ ಅಧ್ಯಾಪಕನಾಗಿ ಸೇರಿದೆ. ನನ್ನ ವಿದ್ಯಾಗುರುಗಳಾದ ಶ್ರೀಕಂಠಯ್ಯ ಅವರು "ವಿಕವಿ" ಎಂಬ ಹೆಸರಿನಲ್ಲಿ ಪ್ರತಿ ಭಾನುವಾರ ಬೆಳಿಗ್ಗೆ ಕನ್ನಡ ಸಾಹಿತ್ಯದ ಪರಿಚಯವನ್ನು ನೀಡುವ ಒಂದು ಅಧ್ಯಯನ ಗೋಷ್ಠಿಯನ್ನು ಕರೆದು ಜೈಮುನಿ ಭಾರತ, ಕುಮಾರ ವ್ಯಾಸ ಭಾರತ ಮುಂತಾದ ವಿಷಯಗಳ ಬಗೆಗೆ ಮಾತನಾಡುತ್ತಿದ್ದರು. ಈ ಅವಧಿಯಲ್ಲಿ ಪ್ರಕಟನೆಗೊಂಡ 'ಸಿರಿಭೂವಲಯ'ದ ಬಗೆಗೆ ನಮಗೆ ತಿಳಿಸಿದ, ಅವರು ಅದರ ಒಂದು ಪ್ರತಿಯನ್ನು ಖರೀದಿಸಬೇಕು ಎಂದು ಹೇಳಿ ತಾವೇ ಬೆಂಗಳೂರಿನಿಂದ ಪ್ರತಿಗಳನ್ನು ತಂದು ಹಂಚಿದ್ದರು. ಹೀಗೆ ನನಗೆ ಮೊಟ್ಟ ಮೊದಲಿಗೆ 'ಸಿರಿಭೂವಲಯ'ದ ಮಹತ್ವವನ್ನು ಮತ್ತು ದಿ|| ಕೆ.ಅನಂತ ಸುಬ್ಬರಾಯರ ಬಗ್ಗೆ ತಿಳಿಸಿದವರು ನನ್ನ ವಿದ್ಯಾಗುರುಗಳಾದ ಶ್ರೀಕಂಠಯ್ಯನವರು. ಇವರು ಮಾಗಡಿಯವರು. ಸಿರಿಭೂವಲಯದ ಬಗೆಗೆ ನನ್ನಲ್ಲಿ ಗೌರವ ಭಾವನೆ ಮೂಡಿದ್ದು ಹೀಗೆ.

ಕಾಲಮುಂದುವರಿದು ಶ್ರೀಕಂಠಯ್ಯ ಅವರು ಸೇವೆಯಿಂದ ನಿವೃತ್ತಿ ಆದ ಮರುವರ್ಷವೇ ಮರಣ ಹೊಂದಿದರು. ನಾನೂ ನಿವೃತ್ತಿ ಹೊಂದಿ ಅನಿವಾರ್ಯವಾಗಿ ಬೆಂಗಳೂರಿನಲ್ಲಿ ನೆಲೆಸಬೇಕಾಗಿ ಬಂತು. 1992ರಲ್ಲಿ ಬೆಂಗಳೂರಿಗೆ ಬಂದ ನನಗೆ ಪುಸ್ತಕ

ಶಕ್ತಿಯ ವೈ.ಕೆ. ಮೋಹನ್ ಅವರ ಪರಿಚಯವಾಗಿ ಅಂಗಡಿಯಲ್ಲಿ ನಮಗೆ ಸಾಹಿತ್ಯದ ಬಗೆಗೆ ಹರಟಲು ಆಸ್ಪದ ದೊರೆಯಿತು. ಹೀಗೆ ಹರಟುವಾಗ ನಾನು ಸಿರಿಭೂವಲಯದ ಪ್ರಸ್ತಾಪವೆತ್ತಿದೆ. ಈ ಹೊತ್ತಿಗಾಗಲೇ ವೈ.ಕೆ.ಮೋಹನ್ ಅವರು ವಿಶಿಷ್ಟ ಪುಸ್ತಕಗಳ ಮುದ್ರಣ ಕಾರ್ಯಕೈಗೆತ್ತಿಕೊಂಡರು. ಅವರು ಸಿರಿಭೂವಲಯದ ಬಗೆಗೆ ವಿಶೇಷ ಆಸಕ್ತಿ ತಳೆದು ಅದರ ವಿವಿಧ ವಿವರಣೆಗಳನ್ನು ಕಲೆ ಹಾಕಿ ಅದರ ಪ್ರಕಟನೆಗೆ ಕಟಿಬದ್ಧರಾದರು. ಅದರ ಫಲವೇ ಇಂದು ನಾವು ಕಾಣುತ್ತಿರುವ ಸಿರಿಭೂವಲಯ ಅನಂತ ಸುಬ್ಬರಾಯರು ಕಂಡಂತೆ ಕೃತಿ.

ಸಿರಿಭೂವಲಯ ಒಂದು ವಿಸ್ಮಯಕಾರಿ ಹಾಗೂ ಅಪೂರ್ವ ಗ್ರಂಥ. ನನಗೆ ಇದ್ದಿರಬಹುದಾದ ಆಕರ್ಷಣೆ ಎಂದರೆ ಮೊಟ್ಟ ಮೊದಲಿಗೆ ಇದರ ಗ್ರಂಥಕರ್ತನು ಕನ್ನಡಿಗ. ಎರಡನೆಯದೆಂದರೆ ಸುಮಾರು ಎಂಟನೆಯ ಶತಮಾನದ ಹೊತ್ತಿಗೇ ಈ ಬಗೆಗೆ ವೈಜ್ಞಾನಿಕ ಕೃತಿಯೊಂದನ್ನು ಬಹಿರಂಗಗೊಳಿಸಿದ ಕೀರ್ತಿ ಕನ್ನಡಾಂಬೆಗೆ ಸಂದಿದ್ದು. ಕನ್ನಡ ಎಂದರೇ ಮೂಗು ಮುರಿಯುವ ಹಾಗೂ ವಿಜ್ಞಾನ ವಿದ್ಯೆಗಳಿಗೆ ಕನ್ನಡ ಭಾಷೆಯು ತುಂಬಾ ಅಸಮರ್ಥ ಎಂದು ಟೀಕಿಸುವ "ಸುಡೋ ವಿಜ್ಞಾನ" ಆರಾಧಕರು ಅರಿಯಲೇಬೇಕಾದ ವಿಷಯ ಎಂದರೆ: `Beyond The barriers of all Languages' ಅಂದರೆ ಸರ್ವಭಾಷಾಮಯಿ ಈ ವಿಶ್ವ ಕೃತಿ ಪ್ರಕಟನೆ ಅದು ಕನ್ನಡಿಗನಾದ ಜೈನಮುನಿ ಕುಮುದೇಂದು ಅವರು ಅಂಕಾಕ್ಷರಗಳಲ್ಲಿ ಅಂದರೆ ಕೇವಲ ಸಂಖ್ಯೆಗಳಲ್ಲಿ ರಚಿಸಿದ್ದು. ಇಂದಿನ ದಿನಗಳಲ್ಲಿ ಕಂಪ್ಯೂಟರ್ ವಿದ್ಯೆವಿಶ್ವ ವ್ಯಾಪಿಯಾಗಿ ದಶಮಾಂಕ ಪದ್ಧತಿಯ ಮುಖಾಂತರ ಭಾಷೆಯನ್ನು ಸಂಖ್ಯೆಗಳಿಗೆ ಅಳವಡಿಸಿಕೊಂಡು ಪ್ರಚಾರ ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಇಂತಹ ಭಾಷೆಯನ್ನೇ ಯಾವ ಯಂತ್ರಗಳ ಸಹಾಯವಿಲ್ಲದೇ ಎಂಟನೆಯ ಶತಮಾನದಲ್ಲಿಯೇ ಜೈನಕನ್ನಡ ಕವಿಯೊರ್ವನು ಕನ್ನಡ ಅಂಕಿಗಳನ್ನೇ ಪ್ರಯೋಗಿಸಿ ಗ್ರಂಥವೊಂದನ್ನು ರಚಿಸಿದ್ದು ನಾವು ಹೆಮ್ಮೆ ಪಡಬೇಕಾದ ವಿಷಯವಾಗಿದ್ದರೂ ಈ ಅಪೂರ್ವ ಗ್ರಂಥ ಮೂಲೆಗುಂಪಾಗಿರುವುದು ಶೋಚನೀಯ. ಅಂಕಾಕ್ಷರ ಅಥವಾ ಸಂಖ್ಯೆಗಳ ದಿವ್ಯ ಜ್ಞಾನವನ್ನು ನೀಡಿದ ಈ ಕೃತಿಯ ಕಥೆ, ಕಥೆಯಾಗಿರದೇ ವ್ಯಥೆಯಾಗಿದೆ.

ಈ ಗ್ರಂಥದ ವೈಶಿಷ್ಟತೆ ಎಂದರೆ ಲಿಪಿ. ಇದು ಯಾವುದೇ ಭಾಷೆಯಲ್ಲಿಲ್ಲ. ಸಂಖ್ಯೆಗಳ ಚಕ್ರಬಂಧ ಸ್ವರೂಪದಲ್ಲಿದೆ. ಇದರಲ್ಲಿ ಒಂದರಿಂದ ಅರವತ್ತುನಾಲ್ಕು ಸಂಖ್ಯೆಗಳನ್ನು ಮಾತ್ರ ಬಳಸಲಾಗಿದೆ. 27x 27 ಚೌಕದ ರೂಪದಲ್ಲಿ 729 ಮನೆಗಳಲ್ಲಿ ಚಕ್ರಬಂಧ ವಿಧಾನದಲ್ಲಿ ಸಂಖ್ಯೆಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದರಲ್ಲಿ 16000 ಚಕ್ರಬಂಧನಗಳಿದ್ದವೆಂದೂ ಆದರೆ ಇಂದು ನಮಗೆ ಕೇವಲ 1,270 ಚಕ್ರಗಳು ಮಾತ್ರ ಲಭ್ಯವಿದೆ ಎಂದೂ ವಿದ್ವಾಂಸರು ಹೇಳುತ್ತಾರೆ. ಹೀಗೆ ಈ ಚಕ್ರಬಂಧನದಲ್ಲಿನ ಅಂಕಿಗಳನ್ನು

ಕ್ರಮವಾಗಿ ಅಕ್ಷರಗಳಿಗೆ ಪರಿವರ್ತಿಸಿದಲ್ಲಿ ಕಾವ್ಯಧಾರೆ ಹೊರ ಹೊಮ್ಮುತ್ತದೆ. ಇದೊಂದು ಸರ್ವ ಭಾಷಾಮಯಿ ಗ್ರಂಥವಾಗಿದ್ದು; ವೇದಾಂತ, ವೈದ್ಯಕೀಯ, ವಿಜ್ಞಾನ, ಗಣಿತ, ರಸಾಯನ ಶಾಸ್ತ್ರ, ಲೋಹ ಶಾಸ್ತ್ರ ಮೊದಲಾದ ವಿದ್ಯೆಗಳಿಂದ ಒಳಗೊಂಡಿದೆ ಎಂದೇ ಹೇಳಲಾಗಿದೆ. ಆದರೆ ಈ ವಿಷಯಗಳನ್ನು ಅರಿತುಕೊಂಡಿರುವ ವಿದ್ಯಾವಂತರ ಅಭಾವವಿರುವುದರಿಂದ, ಈ ಗ್ರಂಥ ಇಂದು ಮೂಲೆ ಗುಂಪಾಗಿದೆ.

ಈ ಗ್ರಂಥದ ಪ್ರಕಟನೆಗೆ ತನ್ನದೇ ಆದ ಒಂದು ಇತಿಹಾಸವೇ ಇದೆ. ಅದನ್ನು ಸ್ಥೂಲವಾಗಿ ವಿವರಿಸಿ ಇಂದು ಹೇಗೆ ಈ ಗ್ರಂಥದ ಪ್ರಯೋಜನ ಪಡೆಯಬಹುದು ಎಂಬುದನ್ನು ಸಹೃದಯಿಗಳ ಮುಂದೆ ಇಡಬಯಸುವೆ.

ಈ ಗ್ರಂಥವನ್ನು ಜನಪ್ರಿಯಗೊಳಿಸಲು ದಿವಂಗತ ಎಲ್ಲಪ್ಪಶಾಸ್ತ್ರಿಗಳು, ಸರ್ವಶ್ರೀ ಕರ್ಲಮಂಗಲ ಶ್ರೀಕಂಠಯ್ಯ, ಡಾ|| ಎಸ್ ಶ್ರೀ ಕಂಠಶಾಸ್ತ್ರೀ ಹಾಗೂ ಕನ್ನಡ ಬೆರಳೆಚ್ಚು ಸಂಶೋಧಕರಾಗಿದ್ದ ಕೆ.ಅನಂತ ಸುಬ್ಬರಾಯರು ತುಂಬಾ ಪರಿಶ್ರಮಿಸಿದ ಮಹನೀಯರು. ಸಂಶೋಧಕರಾಗಿದ್ದ ಹುಲ್ಲೂರು ಶ್ರೀನಿವಾಸ ಜೋಯಿಸರು ಹಾಗೂ ಕರ್ನಾಟಕ ರಾಜ್ಯದ ಮಾಜಿ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪ ಅವರ ಸತತ ಶ್ರಮದಿಂದ ಈ ಗ್ರಂಥವು ಅಂದಿನ ರಾಷ್ಟ್ರಪತಿಗಳಾದ ದಿವಂಗತ ಡಾ| ರಾಜೇಂದ್ರ ಪ್ರಸಾದ ಹಾಗೂ ಕರ್ನಾಟಕದ ರಾಜ್ಯಪಾಲರಾಗಿದ್ದ ಶ್ರೀಜಯಚಾಮರಾಜೇಂದ್ರ ಒಡೆಯರ ಗಮನಕ್ಕೆ ಬಂದು, ರಾಷ್ಟ್ರಪತಿಯವರು ಈ ಗ್ರಂಥದ ಒಂದು ಮೈಕ್ರೋಫಿಲಂ ಮಾಡಿಸಿ ಅದನ್ನು ದೆಹಲಿಯ ರಾಷ್ಟ್ರೀಯ ಪತ್ರಗಾರದಲ್ಲಡಿಸಿದ್ದಾರೆ. ಇಷ್ಟಾದ ನಂತರವೂ ಇದಕ್ಕೆ ಸಿಗಬೇಕಾದ ಸ್ಥಾನ-ಮಾನ ದೊರಯದೇ ಹೋದದು ಶೋಚನೀಯ. ಈ ಒಂದು ಹಿನ್ನೆಲೆಯಲ್ಲಿ ವಿಸ್ಮಯಕಾರಿ ಈ ಗ್ರಂಥದ ಪ್ರಕಟನೆಗೆ ಪುಸ್ತಕ ಶಕ್ತಿ ಶ್ರೀ ವೈ.ಕೆ. ಮೋಹನ್ ಅವರು ಮುಂದೆ ಬಂದಿರುವುದು ಶ್ಲಾಘನೀಯ ಹಾಗೂ ಸಾಹಸದ ಸಂಗತಿಯಾಗಿದೆ.

ಇದರಲ್ಲಿ ಅಡಕವಾಗಿರಬಹುದಾದ ಅನೇಕ ವಿಸ್ಮಯಕಾರಿ ವಿಷಯಗಳು ಇನ್ನೂ ಹೊರ ಬರಬೇಕು. ಹೀಗಾಗಿ ಸಾಹಿತ್ಯಾರಾಧಕರು, ಸಂಶೋಧಕರು ಈ ಕೃತಿಯ ಬಗೆಗೆ ಅಧಿಕ ಆಸಕ್ತಿ ವಹಿಸಬೇಕು.ಈ ಒಂದು ದೃಷ್ಟಿಕೋನದಿಂದಲೇ ಈ ಕೃತಿಯನ್ನು ಕರ್ನಾಟಕದ ರಾಜ್ಯಪಾಲರೂ, ವಿದ್ವಾಂಸರೂ ಆದ ಡಾ|| ಚತುರ್ವೇದೀಯವರಿಂದ ಪ್ರಶಂಶೆಗೆ ಪಾತ್ರವಾಗಿ ಬಿಡುಗಡೆ ಮಾಡಿಸಿದುದಲ್ಲದೇ ಮಾನವ ಸಂಪನ್ಮೂಲ ಮಂತ್ರಿಗಳಾಗಿ ಕೇಂದ್ರ ಸರಕಾರದಲ್ಲಿ ಸೇವೆಯಲ್ಲಿರುವ ಪ್ರೊ. ಮುರಳೀ ಮನೋಹರ ಜೋಷಿ ಅವರನ್ನು ಭೇಟಿಮಾಡಿ ಈ ಕೃತಿಯನ್ನು ಹಿಂದಿ ಮಾಧ್ಯಮಕ್ಕೆ ಅನುವಾದಮಾಡಿ ಕೊಡಲು ಕೋರಲಾಗಿ ಅದರ ಫಲವೇ ಈ ಗ್ರಂಥ ಹಿಂದಿ ಭಾಷೆಗೆ ಈಗ ಅನುವಾದವಾಗಿದೆ.

ಪುಸ್ತಕ ಶಕ್ತಿ ಕಾರ್ಯಕ್ಕೆ ಹಾಗೂ ಕು॥ ಎನ್. ಪ್ರಭಾವತಿಯ ಅನಂತ ಸುಬ್ಬರಾಯರ ವಿಷಯ ಸಂಗ್ರಹ ಕಾರ್ಯ ಸಾಹಸಕ್ಕೆ ಜಯ ದೊರೆಯಲಿ ಎಂದೇ ಹಾರೈಸುವೆ.

ಪ್ರೊ. ಎಂ.ಧ್ರುವನಾರಾಯಣ

10/2 13 ಕ್ರಾಸ್, 11 ಬ್ಲಾಕ್
ಜಯನಗರ - ಬೆಂಗಳೂರು 11

# ನಲ್ನುಡಿ

ಕನ್ನಡದ ಕಲಿಭೀಷ್ಮ ಕೆ. ಅನಂತ ಸುಬ್ಬರಾಯರು ಕನ್ನಡಿಗರಿಗೆ ಪ್ರಾತಃಸ್ಮರಣೀಯರು. ಅವರು ಕನ್ನಡ ಬೆರಳಚ್ಚು ಯಂತ್ರದ ಬ್ರಹ್ಮ ಎಂಬುದಷ್ಟೇ ಅದಕ್ಕೆ ಕಾರಣವಲ್ಲ; ಅದು ಕನ್ನಡ ಬೆರಳಚ್ಚಿನ ಕ್ಷೇತ್ರವಿರಲಿ, ಶೀಘ್ರಲಿಪಿಯ ಅಂಗಳವಿರಲಿ, ಸಿರಿಭೂವಲಯದ ಜಗತ್ತಿರಲಿ, ಅಲ್ಲೆಲ್ಲ ಕನ್ನಡಿಗರು ಚಿರಕೃತಜ್ಞರಾಗಿರಬೇಕಾದುದು ಕೆ. ಅನಂತಸುಬ್ಬರಾಯರಿಗೆ. ಕನ್ನಡ ಲಿಪಿಯ ಯಶೋಗಾಥೆಯ ಚರಿತ್ರೆಯಲ್ಲಿ ಅವರಿಗೊಂದು ಪ್ರಮುಖ ಸ್ಥಾನವಿದೆ. ಕನ್ನಡದ ಪ್ರಗತಿಯೂ ಅನಂತಸುಬ್ಬರಾಯರ ಜೀವನ ಚರಿತ್ರೆಯೂ ಇತಿಹಾಸದ ಒಂದು ಕಾಲಘಟ್ಟದಲ್ಲಿ ಅವಿನಾಭಾವದಿಂದ ಇರುವುದನ್ನು ನಾವು ನಿಚ್ಚಳವಾಗಿ ಗುರುತಿಸಬಹುದು. ಅವರು ಅನಂತವಾದ ವಿಘ್ನಪರಂಪರೆಗಳನ್ನೆದುರಿಸಿಯೇ ಈ ಸಾಹಸವನ್ನು ಮೆರೆದಿದ್ದಾರೆ. ಈ ಹೋರಾಟವನ್ನು ಅವರು ನಡೆಸಿದುದೂ ಏಕಾಂಗಿಯಾಗಿಯೇ.

'ಸುಧಾರ್ಥಿ' ಅವರು ಕೆ. ಅನಂತಸುಬ್ಬರಾಯರ ಈ ಹೋರಾಟವನ್ನು ಕುರಿತೇ ಆಕಾರಪೂರ್ಣವಾದ ಹೆಚ್ಚೊತ್ತಿಗೆಯೊಂದನ್ನು ರಚಿಸಿದ್ದಾರೆ. ಅದಕ್ಕೆ ಅವರು ಸಾರ್ಥಕವಾಗಿ ಇಟ್ಟಿರುವ ಹೆಸರೂ 'ಅನಂತ' ಎಂಬುದೇ ಆಗಿದೆ. ಅನಂತ ಹೋರಾಟದ ಮೂಲಕ ಕನ್ನಡಕ್ಕೆ ಅನಂತ ಕಾಣಿಕೆಯಿತ್ತ ಸುಬ್ಬರಾಯರ ಕತೆ ಅದು; ಆ ಕಾರಣದಿಂದಲೂ ಅವರು 'ಅನಂತ' ಸುಬ್ಬರಾಯರಾಗಿದ್ದಾರೆ. ಅವರಿಗೆ ಈ ಕೃತಿಯನ್ನರ್ಪಿಸುತ್ತ ಸುಧಾರ್ಥಿ ಅವರು ಹೇಳಿರುವುದು ಹೀಗೆ, "ನಮ್ಮ ಕನ್ನಡದ ನುಡಿವೆಣ್ಣ ಕುಲಗೆಡಿಸಿ ತಮ್ಮ ಕೀರ್ತಿಪ್ರತಿಷ್ಠೆಗಳ ಮೆರಸಲೆಳಸಿದ್ದವರ, ನಿಮ್ಮ ನಿಧಿ ಧೀಶಕ್ತಿ ಬಲದಿಂದ ತರಿದಿಕ್ಕಿ, ಬೆನ್ನುಡಿಯ ಕನ್ನಡಕ್ಕೆ ಕಲ್ಪ ತರುವೆನಿಸಿರುವ ಕನ್ನಡದ ಕಲಿಭೀಷ್ಮ ಒಂಟಿಸಲಗ ಲಿಪಿಮುದ್ರಿಕಾಲಂಸಿರಿ.." ನೇರವಾಗಿ ಹತ್ತಿರದಿಂದಲೇ ಕನ್ನಡ ಅಧಿಕಾರಿಗಳ, ಆಳುವವರ ಮತ್ತು ವ್ಯಕ್ತಿಮತ್ಸರ ಅವಾಂತರಗಳನ್ನು ಕಂಡವರು ಸುಧಾರ್ಥಿ ಅವರು. ಹಾಗಾಗಿ ಅವರ ಮನಸ್ಸು ಕುದಿದಿರುವುದು ಸ್ಪಷ್ಟ.

ಅನಂತಸುಬ್ಬರಾಯರದು ಅಸಾಧಾರಣ ಪ್ರತಿಭೆ, ಅದು ಬಹುಮುಖವಾದುದು ಕೂಡ. ಅವರೊಬ್ಬ ಪತ್ರಿಕೋದ್ಯಮಿಯೂ ಹೌದು ಕನ್ನಡದ ಶಿಕ್ಷಣಕ್ರಮದಲ್ಲಿ ಪರಿಶೋಧನೆ ಮಾಡಿದವರೂ ಹೌದು ಅವರೊಬ್ಬ ಉಪಾಧ್ಯಾಯ, ಶಿಕ್ಷಣತಜ್ಞ, ಸಂಶೋಧಕ, ಯಂತ್ರಜ್ಞ, ಸ್ವಾತಂತ್ರ್ಯ ಹೋರಾಟಗಾರ, ಛಾಯಾಚಿತ್ರಗ್ರಾಹಕ ಎಲ್ಲವೂ ಆಗಿದ್ದರು. ಅಪಾರ ಕುತೂಹಲ ಮತ್ತು ಜ್ಞಾನದಾಹಿಯಾಗಿದ್ದ ಅವರು ಸಾರ್ಥಕ ಯಾತ್ರಿಕರೂ ಆಗಿದ್ದರು. ಅವರಿಗೆ ಅಸಾಧಾರಣವಾದ ಮೇಧಾಶಕ್ತಿಯಿತ್ತು, ಕಲ್ಪನಾ ಶಕ್ತಿ ಇತ್ತು, ಜೊತೆಗೆ ಕ್ರಿಯಾಶಕ್ತಿಯೂ ಇತ್ತು. ಅವರೊಬ್ಬ ಛಲವಾದಿ, ಅವರಿಗೆ ಅಪಾರ ಆತ್ಮವಿಶ್ವಾಸವಿತ್ತು, ಗುರಿಮುಟ್ಟಲು ಬೇಕಾದ ಗಟ್ಟಿ ವ್ಯಕ್ತಿತ್ವವೂ ಅವರದಾಗಿತ್ತು. ಆದರೆ ದುರ್ದೈವವೂ ಅವರ ಜೊತೆಗೆ

ಅಂಟಿಕೊಂಡೇ ಇತ್ತು, ಉದ್ದಕ್ಕೂ ಅದು ಅವರನ್ನು ಕಾಡಿತು. ಆ ಬಗೆಗೆ, ಖ್ಯಾತರಾದ ನಿಟ್ಟೂರು ಶ್ರೀನಿವಾಸರಾವ್ ಅವರು, "ಜನರ ಹಿತವೇ ಅವರ ಧ್ಯೇಯವಾಗಿದ್ದುದರಿಂದ ಅವರು ತಮ್ಮ ಸ್ವಂತ ಹಿತದ ಕಡೆಗೆ ಅಷ್ಟಾಗಿ ಲಕ್ಷ್ಯ ಕೊಡಲಿಲ್ಲ. ಆದರೆ ಅವರ ಈ ಪರಿಹಿತದೃಷ್ಟಿ ಅವರು ನಿರ್ಮಿಸಿದ ಯಂತ್ರೋಪಕರಣಗಳ ವಿಷಯದಲ್ಲಿ ಆಡಳಿತವರ್ಗದವರಾಗಲೀ, ಅದೇ ಕ್ಷೇತ್ರಕ್ಕೆ ಸಂಬಂಧಪಟ್ಟ ಕೆಲವು ಮಂದಿಯಾಗಲೀ ತೋರಿಸಿದ ಸಂಕುಚಿತ ಮನೋವೃತ್ತಿಗೆ ಆಧಾರವಾದದ್ದು ದುರ್ದೈವದ ಮಾತು" ಎಂದಿದ್ದಾರೆ. ಅಸೂಯಾಪರರೂ, ಸ್ವಾರ್ಥಿಗಳು, ನಿರ್ಲಜ್ಜೆ ಮೇಲಾಟಗಾರರು, ಗುಣಗ್ರಾಹಿಗಳಲ್ಲದ ಅಧಿಕಾರಿಗಳು, ಬೇಜವಾಬ್ದಾರಿತನದ ಆಡಳಿತಗಾರರು ಇಂಥವರ ಪರಂಪರೆಯೂ ನಮ್ಮೊಡನೆಯೇ ಇದೆ; ಅದು ಕನ್ನಡಕ್ಕೂ ದುರ್ದೈವದ ಮಾತೇ ಸರಿ. ಆ ಬಗೆಗೆ ಅಪಾರ ಅನುಭವಿಗಳಾದ ನಿಟ್ಟೂರರ ಮಾತು ನಮ್ಮ ಕಣ್ಣು ತೆರೆಸಬೇಕಷ್ಟೆ.

ಹಾಸನ ತಾಲ್ಲೂಕಿಗೆ ಸೇರಿದ ಪುಟ್ಟಗ್ರಾಮ ಅನುಗನ ಹಾಲು. ಅದೊಂದು ಹಳೆಯ ಸಂಕೇತಿ ಗ್ರಾಮ. ಅಲ್ಲಿದ್ದ ವೇದವಿದ್ವಾಂಸರಲ್ಲೊಬ್ಬರು ವೇ॥ ಬ್ರ॥ ಶ್ರೀ ಅನಂತನಾರಾಯಣ ಶಾಸ್ತ್ರಿಗಳು. ಅವರ ಹಿರಿಯ ಮಗ ಶ್ರೀ ಕೇಶವಯ್ಯನವರು. ಅವರು ಉಪಾಧ್ಯಾಯ ವೃತ್ತಿಯನ್ನವಲಂಬಿಸಿದ್ದರು. ಹಂದನಹಾಲು ಗ್ರಾಮದ ಶ್ರೀಮತಿ ಸಾವಿತ್ರಮ್ಮನವರೇ ಅವರ ಪತ್ನಿ. 1907ರ ಡಿಸೆಂಬರ್ 9ನೆಯ ತಾರೀಖು ಅವರಿಗೆ ಪುತ್ರಲಾಭವಾಯಿತು. ಆ ಮಗು ಹುಟ್ಟಿದ್ದು ಮಾರ್ಗಶಿರಶುದ್ಧ ಚೌತಿ ಪಂಚಮಿಯಂದು. ಅಜ್ಜನ ಹೆಸರಿನೊಂದಿಗೆ, ಹುಟ್ಟಿದ ತಿಥಿಯ ಪಾವಿತ್ರ್ಯವನ್ನೂ ಸೇರಿಸಿ, ಮಗುವಿಗೆ 'ಅನಂತ ಸುಬ್ಬರಾಯ' ಎಂದು ಹೆಸರಿಟ್ಟರು. ಆದರೆ ಅವರನ್ನು ಕರೆಯುತ್ತಿದ್ದುದು 'ದೊರೆಸ್ವಾಮಿ' ಎಂದು.

ನಾಲ್ಕು ವರ್ಷದ ಎಳಸಿನಲ್ಲೇ ತಂದೆಯನ್ನು ಕಳೆದುಕೊಂಡ ಅನಂತನು ಬೆಳೆದುದು ತನ್ನ ದೊಡ್ಡಮ್ಮನ ಮನೆಯಲ್ಲಿ ಜೋಡಿ ಕೃಷ್ಣಾಪುರದಲ್ಲಿ. ಅವರ ಬಾಲ್ಯವಿದ್ಯಾಭ್ಯಾಸ ನಡೆದುದು ಕೃಷ್ಣಾಪುರ, ಹಂದನಹಾಲು ಮತ್ತು ಹಾಸನದಲ್ಲಿ. ಬಡತನವು ಹಾಸಿ ಹೊದೆಯುವಷ್ಟಿತ್ತು. ಆದರೂ, ಒಳ್ಳೆಯ ಉಪಾಧ್ಯಾಯರ ಮಾರ್ಗದರ್ಶನವಿತ್ತು, ಬಾಲ್ಯದಲ್ಲಿಯೇ ಕನ್ನಡದ ಬಗ್ಗೆ ಅಪಾರವಾದ ಪ್ರೀತಿಯನ್ನು ಬೆಳೆಸಿಕೊಂಡರು. ಜೊತೆಗೆ ವಿಜ್ಞಾನದಲ್ಲಿಯೂ, ಪ್ರಯೋಗಗಳಲ್ಲಿಯೂ ಅಭಿರುಚಿಯನ್ನು ಬೆಳೆಸಿಕೊಂಡರು. ಮನೆಯನ್ನೇ ಪ್ರಯೋಗಶಾಲೆ ಮಾಡಿಕೊಂಡರು. ಕನ್ನಡ ಬೆರಳಚ್ಚು ಯಂತ್ರದ ಶಿಲ್ಪಿಯ ಪ್ರಥಮ ತಯಾರಿ ಅದಾಗಿತ್ತು. ಇಂಗ್ಲೀಷ್ ಟೈಪ್‌ರೈಟರನ್ನು, ಶಾರ್ಟ್‌ಹ್ಯಾಂಡನ್ನೂ ಕಂಡು, ಕನ್ನಡದ ಬೆರಳಚ್ಚು ಯಂತ್ರ ಮತ್ತು ಶೀಘ್ರಲಿಪಿಯ ಕನಸು ಕಟ್ಟಿದ್ದು ಆಗಲೇ.

ಜೀವನೋಪಾಯಕ್ಕಾಗಿ ಮಾಡುತ್ತಿದ್ದ ಭಿಕ್ಷಾನ್ನವನ್ನು ವಾರಾನ್ನವನ್ನೂ ತೊರೆದು ಸ್ವಂತ ಕಾಲಮೇಲೆ ನಿಲ್ಲುವುದು ಅವರಿಗೆ ಅನಿವಾರ್ಯವಾಗಿತ್ತು. ಅಪ್ಪರ್ ಸೆಕೆಂಡರಿ ಪರೀಕ್ಷೆಯನ್ನು

1925ರಲ್ಲಿ ಮುಗಿಸಿಕೊಂಡರು. ಜೊತೆಗೆ, ಆಗಾಗಲೇ ಗಾಂಧೀಪ್ರಭಾವವು ಅವರನ್ನು ಆಕ್ರಮಿಸತೊಡಗಿತ್ತು. ಶ್ರೀಮತಿ ರಾಜಮ್ಮನವರ ಜೊತೆ ಅವರ ವಿವಾಹವೂ ನಡೆಯಿತು.

ಉಪಾಧ್ಯಾಯರಾಗಿ ಅವರ ವೃತ್ತಿ ಜೀವನದ ಪ್ರಾರಂಭವಾಯಿತು. ಕನ್ನಡ ಶೀಘ್ರಲಿಪಿ ಮತ್ತು ಬೆರಳಚ್ಚು ಯಂತ್ರದ ಸಾಧನೆಯ ದಾರಿಯನ್ನು ತುಳಿಯತೊಡಗಿದರು. ಶಿವಮೊಗ್ಗ ಜಿಲ್ಲೆಯಲ್ಲಿ ಉಪಾಧ್ಯಾಯರಾಗಿದ್ದಾಗಲೇ ಕನ್ನಡ ಶೀಘ್ರಲಿಪಿಯ ಆವಿಷ್ಕಾರದಲ್ಲಿ ಅವರು ಯಶಸ್ಸು ಸಾಧಿಸಿದ್ದರು, ಬೆರಳಚ್ಚು ಯಂತ್ರದ ವಿಷಯದಲ್ಲೂ ಗುರಿಮುಟ್ಟಿದ್ದರು. ಅದೇ ವೇಳೆಗೆ, ಮಹಾತ್ಮಾಜಿಯವರು ದೇಶಸೇವೆಗಾಗಿ ಕೊಡುತ್ತಿದ್ದ ಕರೆಗಳು ಕಾವು ಕೊಡುತ್ತಿದ್ದವು. ಆ ಉದ್ದೇಶಕ್ಕಾಗಿಯೇ ಅವರು ಉಪಾಧ್ಯಾಯ ವೃತ್ತಿಯನ್ನು ತೊರೆದು ಪತ್ರಿಕೊದ್ಯಮವನ್ನು ಪ್ರವೇಶಿಸಿದರು. ಆ ವೃತ್ತಿಯಲ್ಲಿ ತಮ್ಮದೇ ಅನ್ವೇಷಣೆಯ ಶೀಘ್ರಲಿಪಿ ಮತ್ತು ಬೆರಳಚ್ಚುಯಂತ್ರ ಅವರಿಗೆ ನೆರವಾದವು. ಕನ್ನಡವನ್ನು ಸುಲಭವಾಗಿ ಕಲಿಸುವಂತೆ ಬಾಲಬೋಧೆಯನ್ನೂ ಅವರು ಪ್ರಕಟಿಸಿದರು. ಆದರೆ ಅವರ ಬೆರಳಚ್ಚು ಯಂತ್ರಕ್ಕೆ ಮನ್ನಣೆ ದೊರೆಯಲು 30 ವರ್ಷ ಹೊರಾಡಬೇಕಾಯಿತು. ಇದು ನಮ್ಮ ಅಧಿಕಾರಿಗಳೂ ರಾಜಕಾರಣಿಗಳೂ ನಾಡನ್ನು ಬೆಳೆಸುವ ಪರಿ!

ಸ್ವಾತಂತ್ರ್ಯೋತ್ತರ ಭಾರತದಲ್ಲಂತೂ ಸ್ವಾರ್ಥ, ಭ್ರಷ್ಟಾಚಾರ, ದೇಶದ್ರೋಹವೇ ಪ್ರಾದುರ್ಭಾವ ಪಡೆಯಿತು. ಇಂಥ ವರದಿಗಳನ್ನು ನೀಡುವ ಕೆಲಸಕ್ಕೆ ದೇಸಿ ಪತ್ರಿಕೋದ್ಯಮಕ್ಕೆ ವಿದಾಯ ಹೇಳಿದರು, ಸಿರಿಭೂವಲಯದ ಸಂಶೋಧನಾಕಾರ್ಯಕ್ಕೆ, ತಮ್ಮನ್ನು ತೊಡಗಿಸಿಕೊಂಡರು. ಅದರ 1,270 ಚಕ್ರಗಳನ್ನು ತಮ್ಮದೇ ಬೆರಳಚ್ಚು ಯಂತ್ರದಲ್ಲಿಯೇ ಮುದ್ರಿಸಿಕೊಟ್ಟರು. 12,000 ಚಕ್ರಗಳುಳ್ಳ ಜ್ಞಾನಸಾಗರವೇ ಆದ ಆ ಗ್ರಂಥದ ಬಗೆಗೆ ಜನರಿಗೆ ತಿಳಿಸಲೆಂದು ಪ್ರಚಾರಯಾತ್ರೆ ಕೈಗೊಂಡರು.

'ಅನಂತ ಕೀ ಬೋರ್ಡ್‌ನ ಬ್ರಹ್ಮ ಎಂದೇ ಖ್ಯಾತರಾದ ಕೆ. ಅನಂತಸುಬ್ಬರಾಯರು ಬ್ರಹ್ಮಲೋಕವನ್ನು ಸೇರಿದ್ದು 29.11.1985ರಂದು ಇದೀಗ ಅವರು ಗತಿಸಿಯೇ ಹತ್ತಿರ ಹತ್ತಿರ ಕಾಲುಶತಮಾನವಾಗಿದೆ. ಇದೇ 2007ರ ಡಿಸೆಂಬರ್ 9ಕ್ಕೆ ಅವರ ಜನ್ಮ ಶತಮಾನೋತ್ಸವ ನಡೆಯುತ್ತಿದೆ.

ಕೊನೆಯದಾಗಿ, ಈ ಕನ್ನಡ ಬೆರಳಚ್ಚು ಬ್ರಹ್ಮನ ಬಗೆಗೆ ಅಭಿಮಾನಿಯೊಬ್ಬರು ಹೇಳಿದ ಮಾತನ್ನು ಉಲ್ಲೇಖಿಸಲೇ ಬೇಕು. ರಾಯರು ಗತಿಸಿದಾಗಿನ ಸಂದರ್ಭ; ಅವರ ಕಳೇಬರಕ್ಕೆ ಆ ಅಭಿಮಾನಿಯು ತುಳಸೀಹಾರವನ್ನು ಸಮರ್ಪಿಸಿದರು. ಹೀಗೆ ಪಾರ್ಥಿವ ಶರೀರಕ್ಕೆ ತುಳಸೀಹಾರವನ್ನರ್ಪಿಸುವುದು ಬ್ರಹ್ಮೀಭೂತರಾದ ಸನ್ಯಾಸಿಗಳಿಗೆ ಮಾತ್ರ. ಆದರೆ ಅನಂತಸುಬ್ಬರಾಯರು ಸಂಸಾರಿಯಾಗಿದ್ದವರು. ಅದಕ್ಕೆ ಆ ಅಭಿಮಾನಿ ನೀಡಿದ ವಿವರಣೆ

ಇದು; "ತುಲಸಿ ವಿಷ್ಣುವಿಗೆ ಪ್ರಿಯವಾದದ್ದು, ವಿಷ್ಣು ಸ್ಥಿತಿಕರ್ತ, ಕನ್ನಡ ಲಿಪಿಯ ಇಂದಿನ ಸ್ಥಿತಿಗೆ ಅವರೇ ಕಾರಣಕರ್ತರು. ಆದ್ದರಿಂದ ಅವರು ಕನ್ನಡದ ಪಾಲಿಗೆ ವಿಷ್ಣುವೆಂದರೂ ತಪ್ಪಿಲ್ಲ. ಅಲ್ಲದೇ ಸಂಸಾರಿಯಾಗಿದ್ದರೂ ಅವರು ನಡೆಸಿದ ಜೀವನ ಸಂನ್ಯಾಸಿಗಳ ಜೀವನಕ್ರಮಕ್ಕಿಂತಲೂ ಹೆಚ್ಚು ಕಠಿಣವಾದದ್ದು. ಆದ್ದರಿಂದ ದೋಷವೇನಿಲ್ಲ".

ಹೌದು ಅನಂತಸುಬ್ಬರಾಯರು ಕರ್ಮಯೋಗಿ. ಕನ್ನಡಿಗರು ಅವರನ್ನು ಮರೆಯಬಾರದಷ್ಟೆ. ಆದರೆ ಅವರ ಕೀ ಬೋರ್ಡ್ ಮೇಲೆ ಇರುತ್ತಿದ್ದ 'ಅನಂತ ಕೀ ಬೋರ್ಡ್' ಎಂಬ ಹೆಸರು ಈಗ ಮಾಯವಾಗಿಬಿಟ್ಟಿದೆ. ನಮ್ಮ ಕೃತಘ್ನತೆ ಕೂಡ ಅನಂತವಾದುದೇ ಸರಿ.

ಡಾ|| ಬಿ.ಎಸ್. ಪ್ರಣತಾರ್ತಿ ಹರನ್

ಮೈಸೂರು

# 1. ಸಿರಿಭೂವಲಯದ ಗ್ರಂಥ ವಿವರಣೆ

## ಕೆ. ಅನಂತ ಸುಬ್ಬರಾಯರ ಉಪನ್ಯಾಸಗಳಿಂದ

1. ಅಷ್ಟ ಮಹಾಪ್ರಾತಿಹಾರ್ಯ ವಯ್ಭವದಿನ್ದ । ಅಷ್ಟಗುಣನ್‌ಗಳೊಳ್ ಓಮ್‌ದಮ್ । ಸೃಷ್ಟಿಗೆ ಮನ್‌ಗಲ ಪರ್ಯಾಯದಿನಿತ್‌ತ । ಅಷ್ಟಮ ಜಿನಗೆರಗುವೆನು ॥

2. ಕರುಣೆಯಮ್ ಬಹಿರನ್‌ಗೆ ಸಾಮ್ರಾಜ್ಯಮ್ ಲಕ್ಷ್ಮಿಯ। ಅರಹನು ಕರ್ಮಾಟಕದ ॥ ಸಿರಿಮಾತಯ್‌ತನದೆ ಓಮ್‌ದರಿಮ್ ಪೇಳಿದ । ಅರವತ್‌ನಾಲ್‌ಕನ್‌ಕ ಭೂವಲಯ ॥

3. ಸಾಗರದ್‌ವೀಪಗಳೆಲ್‌ಲವ ಗಣಿಸುವ । ಶ್ರೀಗುರು ಐದವರನ್‌ಕ ॥ ನಾಗವ ನಾಕವ ನರಕವ ಮೋಕ್‌ಷವ । ಸಾದನ ವಾಗಿಸಿದ್ ಅನ್‌ಕ ॥

4. ಯಶವಧ್‌ಯಾನಾಗ್ ನಿಯಿಮ್ ಪುಟವಿಡೆ ರಸಸಿದ್‌ಧಿ । ವಶವಾಗುವುದು ಸತ್‌ಯುವಮಣಿಯು । ರಸವಮಣಿಯೋ ಕ್‌ಷದೆ ಕಾವುದವಹುದೆವ್‌ಬ। ರಸಸಿದ್‌ಧಿಯನ್‌ಕ ಭೂವಲಯ ॥

5. ಧಣಧಣವೆನ್‌ನುವ ರಸಮಣಿಯೌಷಧ । ಗಣಿತವಮ್ ನಾಗಾರಾಜುನನು । ಷಣದೊಳಗರಿದನು ಗುರುವಿನ್‌ದ ಲಾತನು । ಗುಣಿಸುತಲೆನ್‌ಟುಕರ್ಮವನು ॥

6. ಸಿದ್‌ಧರಸವ ಮಾಡಿ ಹೂವನು ಕೊನ್‌ದಿಹ । ಬುದ್‌ಧಿಯಜ್‌ಞ್‌ನವ ಕೆಡಿಸಿ । ಶುದ್‌ಧಾತ್‌ಮ ನೆಲೆಇ ಹ ನಿದ್‌ಧರ ಲೋಕದ । ಸಿದ್‌ಧ ಸಿದ್‌ದಾನ್‌ತ ಭೂವಲಯ ॥

7. ಮ್‌ನವು ಸಿಮ್‌ಹಾಸನ ತನುವು ಚಯ್‌ತ್‌ಯಾಲಯ । ಜಿನ ಬಿಮ್‌ಬದನ್‌ತೆ ನನ್ ಆತ್‌ಮ ॥ ನೆನುತ ಅಕ್ಷಯ ವಾದ ಭಾವದ್‌ರವ್‌ಯಗಳಿನ್‌ದ ಘನಬನ್‌ಧ ಪುಣ್‌ಯ ಭೂವಲಯ ॥

8. ಸರ್ವಾರ್ಧ ಸಿದ್‌ಸಮ್‌ಪದದ ನಿರ್ಮಲಕಾವ್‌ಯ । ಧರ್ಮವ ಲೌಕಿಕ ಗಣಿತ ॥ ನಿರ್ಮಯ ಬುದ್‌ಧಿಯನ ವಲಮ್‌ಬಿಸಿರುವರ । ಧರ್ಮಾನುಯೋಗದ ವಸ್‌ತು॥

9. ಆದಿಯ ಅತಿಶಯ ಜ್‌ಞ್‌ನಸಾಮ್ರಾಜ್‌ಯ । ಸಾಧಿತ ವಯ್‌ಭವವಾದ ॥ ಮೋದ ಅ ರ್ಧಾಗಮ ಅವಿರಲಶಬ್‌ದವ । ನೋದಿಪನವಮ ಬನ್‌ಧದೊಳು ॥

10. ರಸಸಿದ್‌ಧಿಯಾಗೆ ದುರ್‌ಲೋಹ ಸುವರ್‌ಣದ। ವಶವಾಗುವನ್ ತಾತ್‌ಮನಿರತ್ ॥
ಯಶವಳಿಸುವ ದೇಹವರ್‌ಜಿತನಾಗುತ । ವಶವಾಗೆ ಮೋಕ್‌ಷವು ಸಿದ್‌ದ ॥
11. ಈಶನಾಗುವನು ಲೋಕಾಗ್‌ರದೆ ನೆಲಸುವ । ರಾಶಿಯೊಳ್‌ಶುದ್ ಧತಾನಾಗಿ ॥
ಲೇಸಾತೀರ್ ಸವದಮ್ ಸಾರೆ ಭಯವರ್ । ರಾಶಿರಾಶಿಯೆ ಕಾದಿಹುದು ॥
12. ಮಾನಮಾನವು ಲೋಭ ಅಕರೋಧಕಷಾಯದ । ತಾಣವೆಲ್‌ಲವ ಈಗಳಿದು ॥
ತಾಣಧಾಣವನೆಲ್‌ಲ ಕಾಣುತಲರಿಯುತ । ಆನನ್‌ದದಿಹರೆಲ್‌ಲ ಸಿದ್‌ದ್‌ರ್ ॥

ಸಿರಿಭೂವಲಯದ ಮೇಲಿನ ಮಂಗಲ ಪ್ರಾಭೃತ ಶ್ಲೋಕದೊಂದಿಗೆ ಸಾಂಗತ್ಯ ಸಂಗೀತ ರೂಪದಿಂದ ಅಷ್ಟಮ ಜಿನನಿಗೆ ನಮಿಸಿ ಅನಂತ ಸುಬ್ಬರಾಯರು ಸಿರಿಭೂವಲಯದ ಉಪನ್ಯಾಸವನ್ನು ಪ್ರಾರಂಭಿಸಿದರು.

## ಸಿರಿಭೂವಲಯ ಸಿದ್ಧಾಂತ

ಓಂ ವಾಗೇಶ್ವರಿ ದೇವಿ ಪ್ರತಿದಿನಂ ಮಮಃ ರಕ್ಷದೇವಿ

ಸಿರಿಗನ್ನಡ ಗೆಲ್ಗೆ ಸಿರಿಗುರು ಕುಮುದೇಂದು ಮುನಿ ವಿರಚಿತ ಸರ್ವಭಾಷಾಮಯಿ ಸಿರಿಭೂವಲಯ ಸಿದ್ಧಾಂತ.

ಸನ್ಮಾನ್ಯರೆ,

ಪ್ರಪಂಚದಲ್ಲೇ ಅತ್ಯಂತ ವಿಚಿತ್ರವೂ ಅತ್ಯಂತ ಮಹತ್ವಪೂರಕವೂ ಆಗಿರತಕ್ಕಂತಹ ಒಂದಾನೊಂದು ಗ್ರಂಥದ ಬಗ್ಗೆ ನಾವು ನಿಮಗೆ ಪರಿಚಯ ಮಾಡಿಕೊಡುತ್ತಿರುವೆ. ಮೊದಲು ಈ ಗ್ರಂಥದ ಬಗ್ಗೆ ಪೂರ್ವಭಾವಿ ವಿವರಣೆಯನ್ನು ಅನಂತರ ಅದರ ಸಾಹಿತ್ಯ ವಿಚಾರಗಳನ್ನು ತಿಳಿಸುತ್ತೇನೆ. ಈ ಗ್ರಂಥದ ಹೆಸರು ಸರ್ವ ಭಾಷಾಮಯಿ ಸಿರಿಭೂವಲಯ ಸಿದ್ಧಾಂತ ಎಂಬುದಾಗಿದೆ, ಹಾಗೆಂದರೆ ಪ್ರಪಂಚದ ಸಮಸ್ತ ಭಾಷೆಗಳ ದಿವ್ಯ ಸಾಹಿತ್ಯವು ಇರುವ ಗ್ರಂಥ ಎಂದರ್ಥ. ಅಷ್ಟೇ ಅಲ್ಲ ಪ್ರಪಂಚದ ಎಲ್ಲ ಭಾಷೆಗಳ ದಿವ್ಯ ಸಾಹಿತ್ಯಗಳೂ ನಮ್ಮ ಚೆನ್ನುಡಿಯ ಕನ್ನಡ ಗ್ರಂಥ ಒಂದರಲ್ಲೇ ತಾನೇ ತಾನಾಗಿ ಉದ್ಭವವಾಗುತ್ತದೆ ಎಂಬುದನ್ನು ಸಿದ್ಧಾಂತಮಾಡಿ ತೋರಿಸಿ ಕೊಡುವ ಗ್ರಂಥವಿದು ಇದೇ ಈ ಗ್ರಂಥದ ಅತ್ಯಂತ ವಿಚಿತ್ರವೂ ಮಹತ್ವ ಪೂರಕವೂ ಆಗಿರುವ ಒಂದು ವಿಷಯವಾಗಿದೆ.

## ಸಿರಿಭೂವಲಯದ ರಚನೆ

ಈ ಸಿರಿಭೂವಲಯ ಸಿದ್ಧಾಂತ ಗ್ರಂಥವನ್ನು ಸಾವಿರ ವರ್ಷಗಳ ಹಿಂದೆ ನಂದಿಬೆಟ್ಟದ ಬಳಿ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದ ತಾಲ್ಲೂಕಿನ ಸುಪ್ರಸಿದ್ಧ ನಂದಿದುರ್ಗದ ಬಳಿ ಯಲವಳ್ಳಿಯಲ್ಲಿದ್ದಂತಹ ಶ್ರೀ ಕುಮುದೇಂದು ಮಹಾಮುನಿಗಳು ಈ ಲೋಕಕ್ಕೆ

ರಚಿಸಿಕೊಟ್ಟರು. ಆದರೆ ಅವರು ಅದನ್ನು ಅಂದು ಇದ್ದಿರಬಹುದಾದ ಕನ್ನಡ ಭಾಷೆಯಲ್ಲಿ ಮತ್ತು ಕನ್ನಡ ಲಿಪಿಯಲ್ಲಿ ಬರೆಯಲಿಲ್ಲ ಅವರು ಬರೆದಿರುವ ಈ ಸಾಹಿತ್ಯವು ಪೂರ್ತಿ ಅಂಕಿ ಶಾಸ್ತ್ರಗಳ ಚಕ್ರಬಂಧಗಳಿಂದ ಕೂಡಿದೆ. ಇದರಮೊದಲ ಚಕ್ರದಲ್ಲಿ 1 ರಿಂದ 64ರ ವರೆಗೆ ಅಂಕಿಗಳು ನಾನಾ ರೀತಿಯಲ್ಲಿ ತುಂಬಲ್ಪಟ್ಟರೆ ಪ್ರತಿಯೊಂದು ಚಕ್ರಗಳಲ್ಲೂ ಅಡ್ಡವಾಗಿ 27 ಮನೆಗಳು ಉದ್ದವಾಗಿ 27 ಮನೆಗಳು ಹೀಗೆ ಒಟ್ಟು 729 ಮನೆಗಳಿಂದ ತುಂಬಲಾಗಿದೆ. ಈ ಚಕ್ರ ಬಂಧ ರಾಶಿಯನ್ನು ಕುಮುದೇಂದು ಮುನಿಗಳು ಯಾವುದೋ ಒಂದು ಅಂಕಾಕ್ಷರ ವಿಜ್ಞಾನದಲ್ಲಿ 6,000 ಸೂತ್ರಗಳಿಂದ ರಚಿಸಿ 15,000 ಶಿಷ್ಯರೊಂದಿಗೆ 9 ಖಂಡಗಳಲ್ಲಿ ರಚಿಸಿದ್ದಾರೆ. ಇಂತಹ ಚಕ್ರಗಳು 12,000 ಇದೆ ಎಂದು ಹೇಳಲ್ಪಟ್ಟಿದೆ.

## ಸಿರಿಭೂವಲಯ ಗ್ರಂಥದ ಜ್ಞಾನೋದಯ

ಸಿರಿಭೂವಲಯ ಗ್ರಂಥವನ್ನು ಕಾಲಾನುಕ್ರಮದಲ್ಲಿ ದಾನಚಿಂತಾಮಣಿ ಮಲ್ಲಿಕಬ್ಬೆ ಎಂಬ ಜೈನ ಕವಿಯಿತ್ರಿಯು ಪ್ರತಿಗಳನ್ನು ಮಾಡಿಸಿ ಶಾಸ್ತ್ರದಾನ ಮಾಡಿಸಿದಳೆಂದು ತಿಳಿದುಬರುತ್ತದೆ. ಆ ಒಂದು ಪ್ರತಿಯು ಈಗ್ಗೆ ಸುಮಾರು 60 ವರ್ಷಗಳ ಹಿಂದೆ ಇದ್ದ ಘನ ವಿದ್ವಾಂಸರಾದ ಕೀರ್ತಿಶೇಷ ಧರಣೇಂದ್ರ ಪಂಡಿತರ ಬಳಿ ಅದು ಇದ್ದಿತು. ಅದನ್ನು ಅವರು ಅಂಕಿಗಳಲ್ಲಿಯೇ ಓದಿ ಅನೇಕ ಶಾಸ್ತ್ರ ವಿಷಯಗಳನ್ನು ಹೇಳುತ್ತಿದ್ದರು. ಅದನ್ನು ವೈ. ಎಲ್. ಧರ್ಮಪಾಲ್‌ರವರ ತಂದೆಯವರಾದ ಕೀರ್ತಿ ಶೇಷ ಪಂಡಿತ ಎಮ್. ಎಲ್ಲಪ್ಪ ಶಾಸ್ತ್ರಿಗಳು ಪಡೆದುಕೊಂಡರು. ಆದರೆ ಈ ಚಕ್ರಬಂಧಗಳು ಏನೆಂಬುದು ತಿಳಿಯಲು 30 ವರ್ಷಗಳ ಕಾಲ ಪರಿಶ್ರಮಪಟ್ಟು ಭಾರತದಾದ್ಯಂತ ಸಂಚರಿಸಿ ನಾನಾ ವಿದ್ವಾಂಸರೊಂದಿಗೆ ಚರ್ಚಿಸಿ ಪರ್ಯಾಲೋಚಿಸಿದರು. ಆದರೂ ಚಕ್ರಗಳ ರಹಸ್ಯ ತಿಳಿಯಲಾಗಲಿಲ್ಲ ಇದೇ ಚಿಂತೆಯಲ್ಲಿದ್ದಾಗ ಒಂದು ದಿನ ರಾತ್ರಿ ನಿದ್ದೆ ಮಾಡುತ್ತಿದ್ದಾಗ ಬೆಳಗಿನ ಜಾವ 3.00ರ ಹೊತ್ತಿಗೆ ಜ್ಞಾನೋದಯುವಾಯಿತು ಕೂಡಲೆ ಶಾಸ್ತ್ರಿಗಳು ಎಚ್ಚೆತ್ತು ಕೊಂಡು ಆ ಅಂಕಿಗಳೆಲ್ಲ ಅಕ್ಷರಗಳಾಗುತ್ತವೆಂದು ಅರಿತು ಅದರಂತೆ ಚಕ್ರಗಳಲ್ಲಿ ಅಂಕಿಗಳ ಬದಲಿಗೆ ಅಕ್ಷರಗಳನ್ನು ಒಂದು ವಿಧಾನದಲ್ಲಿ ಓದುವುದನ್ನು ಕಂಡುಕೊಂಡು ಅದರಂತೆ ಎಲ್ಲರೂ ಸಿರಿಭೂವಲಯವನ್ನು ಓದುವಂತೆ ಒಂದು ಕ್ರಮವನ್ನು ತಿಳಿಸಿದರು.

ಈ ಮಹಾನ್ ಸಾಹಿತ್ಯದ ರೂಪುರೇಖೆಗಳನ್ನು ಖಚಿತಪಡಿಸುವ ಬಗ್ಗೆಯು ಅದರಲ್ಲಿ ತಾನೇ ತಾನಾಗಿ ಹುಟ್ಟಿಬರುವ ನಾನಾ ಭಾಷೆಗಳ ಸಾಹಿತ್ಯವನ್ನು ಗುರುತಿಸುವುದರಲ್ಲಿ ಈ ಗ್ರಂಥದ ಮಂಗಲ ಪ್ರಾಬೃತದ 33 ಅಧ್ಯಾಯಗಳನ್ನು ಅಪಾರಶ್ರಮವಹಿಸಿದ ಸರ್ವಾರ್ಥಸಿದ್ಧಿ ಸಂಘದವರು ಪ್ರಕಟಿಸಲು ಅಪಾರಶ್ರಮವಹಿಸಿದ ಕೀತಿಶೇಷ ಕರ್ಲಮಂಗಲ ಶ್ರೀಕಂಠಯ್ಯನವರನ್ನು ಸ್ಮರಿಸದಿರಲಾರೆವು.

# ಸಿರಿಭೂವಲಯ ಗ್ರಂಥದ (ಭಾಗ-1) ಬಿಡುಗಡೆ

## "ಸಿರಿಭೂವಲಯ" ಪ್ರಥಮ ಪರಿಷ್ಕರಣ ೨೨-೩-೧೯೫೩ರಲ್ಲಿ ಬಿಡುಗಡೆಯಾದ ಸಂದರ್ಭದ ಆಮಂತ್ರಣ ಪತ್ರಿಕೆ

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
(ಇವರ ಆಶ್ರಯದಲ್ಲಿ)

ತಾರೀಖು ೨೨-೩-೧೯೫೩ನೆಯ ಭಾನುವಾರ
ಸಂಜೆ ೬ ಘಂಟೆಗೆ ಸರಿಯಾಗಿ
ಶ್ರೀ ಕೃಷ್ಣರಾಜ ಪರಿಷನ್ಮಂದಿರದ ಸಭಾಂಗಣದಲ್ಲಿ
ಸ್ಯಾದ್ವಾದ ಭೂಷಣ ವೈದ್ಯರಾಜ ಪಂಡಿತ ಶ್ರೀ ಎಲ್ಲಪ್ಪ ಶಾಸ್ತ್ರೀ ಅವರಿಂದ
[illegible] ಪ್ರಕಟನೆಗೆ ಸಿದ್ಧವಾಗಿರುವ
ಶ್ರೀ ಕುಮುದೇಂದು ಗುರುವಿರಚಿತ
'ಸಿರಿ ಭೂವಲಯ'
ಗ್ರಂಥದ ಪ್ರಕಟನೋತ್ಸವವನ್ನು
ಮೈಸೂರು ಸಂಸ್ಥಾನದ ವಿದ್ಯಾ ಮಂತ್ರಿಗಳಾದ
ಶ್ರೀ ಎ. ಜಿ. ರಾಮಚಂದ್ರರಾವ್, ಬಿ.ಎ., ಎಲ್‌ಎಲ್.ಬಿ. ಅವರು
ನೆರವೇರಿಸಲು ಕೃಪೆಯಿಟ್ಟು ಒಪ್ಪಿರುತ್ತಾರೆ.
ಸರ್ವರೂ ದಯಮಾಡಿಸಬೇಕಾಗಿ ವಿನಂತಿ.

[illegible] ಶ್ರೀಕಂಠಯ್ಯ,
ಪ್ರಕಾಶಕ
[illegible] ಗ್ರಂಥ

ಸಿ. ಕೆ. ನಾಗರಾಜರಾವ್
ಗೌ|| ಕಾರ್ಯದರ್ಶಿಗಳು

ಕಾರ್ಯಕ್ರಮ

೧. ಪ್ರಾರ್ಥನೆ
೨. ಸ್ವಾಗತ—ಪರಿಷತ್ತಿನ ಅಧ್ಯಕ್ಷರಿಂದ
೩. ಕಾವ್ಯವಾಚನ—("ಸಿರಿ ಭೂವಲಯ" ಗ್ರಂಥದಿಂದ) ಶ್ರೀ ಕರ್ಲಮಂಗಲದ ಶ್ರೀಕಂಠಯ್ಯನವರಿಂದ
೪. ಗ್ರಂಥ ಪರಿಚಯ—ಸ್ಯಾದ್ವಾದ ಭೂಷಣ ವೈದ್ಯರಾಜ ಪಂಡಿತ ಶ್ರೀ ಎಲ್ಲಪ್ಪ ಶಾಸ್ತ್ರೀ ಅವರಿಂದ
೫. ಗ್ರಂಥದ ಪ್ರಕಟನೆ—ವಿದ್ಯಾ ಮಂತ್ರಿಗಳಾದ ಶ್ರೀ ಎ. ಜಿ. ರಾಮಚಂದ್ರರಾವ್, ಬಿ.ಎ., ಎಲ್‌ಎಲ್.ಬಿ. ಅವರಿಂದ
೬. ವಂದನಾರ್ಪಣೆ.

[illegible] ಕನ್ನಡ ಸಾಹಿತ್ಯ ಪರಿಷತ್ತು, [illegible]

ಈ ಗ್ರಂಥವನ್ನು ದಿನಾಂಕ 05-03-1953 ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಂದಿನ ವಿದ್ಯಾಸಚಿವರಾದ ಶ್ರೀಮಾನ್ ಎ.ಜೆ. ರಾಮಚಂದ್ರರಾವ್ ರಿಂದ ಬಿಡುಗಡೆ ಮಾಡಲಾಯಿತು. ಆ ನಂತರ ಈ ಗ್ರಂಥವನ್ನು ಅನೇಕ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಮತ್ತು ನಮ್ಮ ಕರ್ನಾಟಕ ರಾಜ್ಯ ಮತ್ತು ಭಾರತದಾದ್ಯಂತ ಎಲ್ಲಾ ಕಡೆಗಳಲ್ಲೂ ಅನೇಕ ವಿದ್ವಾಂಸರ ಮುಂದೆ ಪ್ರದರ್ಶಿಸಲಾಯಿತು. ಇದರಿಂದ ಸಮಸ್ತರಿಂದಲೂ ಮೆಚ್ಚುಗೆಯನ್ನು ಈ ಗ್ರಂಥ ಪಡೆದುಕೊಂಡಿತು. ಈ ಗ್ರಂಥವನ್ನು ನಮ್ಮ ರಾಜ್ಯದ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ನಿಜಲಿಂಗಪ್ಪನವರು ಮತ್ತು ಅಖಿಲ ಭಾರತ ಕಾಂಗ್ರೇಸ್‌ನ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಯು.ವಿ. ದೇಬರ್ ಅವರುಗಳ ನೆರವಿನಿಂದ ಈ ಗ್ರಂಥವನ್ನು ನಮ್ಮ ರಾಷ್ಟ್ರದ ಪ್ರಥಮ ರಾಷ್ಟ್ರಾಧ್ಯಕ್ಷರಾದ ಸನ್ಮಾನ ಶ್ರೀ ಡಾ|| ಬಾಬು ರಾಜೇಂದ್ರಪ್ರಸಾದ್‌ರವರಿಗೆ ತೋರಿಸಲಾಯಿತು ಅವರು ರಾಷ್ಟ್ರದ ಮತ್ತು ವಿಶ್ವದ ಅನೇಕ ವಿದ್ವಾಂಸರೊಂದಿಗೆ ಕೂಡಿ ಇದನ್ನು ಅನೇಕ ಸಲ ಪರಿಶೀಲಿಸಿ ಈ ಗ್ರಂಥದ ಮಹತ್ವ ತಿಳಿದು ಈ ಗ್ರಂಥವು ಭಾರತ ಮಾತ್ರವಲ್ಲ ಇಡೀ ಪ್ರಪಂಚಕ್ಕೆ ಅತ್ಯಂತ ಉಪಯುಕ್ತವಾದ ಸಾಹಿತ್ಯವೆಂದು ಭಾವಿಸಿದರು ಮತ್ತು ಇದನ್ನು ತಾವೇ ಸ್ವತಹಃ ಆಸಕ್ತಿವಹಿಸಿ ರಾಷ್ಟ್ರೀಯ ಸಾಹಿತ್ಯ ರಕ್ಷಣಾಲಯದಲ್ಲಿ ಈ ಗ್ರಂಥವನ್ನು ಮೈಕ್ರೋಪಿಲಂ ಮಾಡಿಸಿ ಶಾಶ್ವತಗೊಳಿಸಿದ್ದಾರೆ. ಈ ಮಹಾಗ್ರಂಥಕ್ಕೆ ದೆಹಲಿಯಲ್ಲಿರುವ ಪರಮ ಪೂಜ್ಯರಾದ 1008 ಸ್ವಸ್ತಿಶ್ರೀ ಶ್ರೀ ಆಚಾರ್ಯ ದೇಶಭೂಷಣ ಸ್ವಾಮೀಜಿಯವರು



ಆಚಾರ್ಯ ಶ್ರೀ ದೇಶಭೂಷಣ ಸ್ವಾಮಿಜೀ

ಹಿಂದಿಭಾಷೆಯಲ್ಲಿ ಟೀಕು ಬರೆದಿದ್ದಾರೆ. ಈಗ್ರಂಥವು 6,00,000 ಶ್ಲೋಕಗಳಿಂದ ಕೂಡಿದೆ ಆ 6,00,000 ಶ್ಲೋಕಗಳೂ ಕೂಡ ಇಡೀ ಪ್ರಪಂಚದಲ್ಲಿ ಸಾಮಾನ್ಯವಾಗಿ ಎಲ್ಲ ಪದ್ಯ ಸಾಹಿತ್ಯಕ್ಕೂ ಆಧಾರವಾಗಿರುವಂತಹ ಒಂದು ಸಾಂಗತ್ಯ ಎನ್ನುವ ಸುಲಭ ರೂಪದಲ್ಲಿ ಜಾನಪದ ಗೀತೆಯ ರೂಪದಲ್ಲಿ ಸಾಂಗತ್ಯ ಬರೆದಿದೆ. ಇದರಲ್ಲಿ ಬರುವ 6,00,000 ಶ್ಲೋಕಗಳು ಅದರಲ್ಲಿ ದೊರೆಯುವ ಅಂತರ ಪದ್ಯಗಳೂ ಅದೇ ಸಾಂಗತ್ಯರೂಪದಲ್ಲಿ ದೊರೆಯುತ್ತದೆ ಮಾತ್ರವಲ್ಲ ಸಮಸ್ತ ಪ್ರತಿಗಳು ದ್ವಿತಿಯಾಸ್ತರ ಪ್ರಾಸದಿಂದ ತಾನೇ ತಾನಾಗಿ ಲಬಿಸುತ್ತದೆ ಎಂಬುದೇ ಅತ್ಯಂತ ಮಹತ್ತರವಾದ ಗಣಿತ ಸಿದ್ಧಾಂತವನ್ನು ಸೂಚಿಸುತ್ತದೆ. ಪ್ರಪಂಚದ ಆದಿಯಲ್ಲೇ ಎಂದರೆ ಅನಾದಿ ಕಾಲದಿಂದ ಮನುಷ್ಯ ಪಶು, ಮೃಗ, ಪಕ್ಷಿ, ಸೂರ್ಯ, ಚಂದ್ರ, ನಕ್ಷತ್ರ, ಗಿಡ, ಮರ, ಬಳ್ಳಿ ಮುಂತಾದವುಗಳು ಒಂದು ಗಣಿತದ ಆಧಾರ ಮತ್ತು ಒಂದು ತತ್ವದ ಮೂಲಕ ಸೃಷ್ಟಿಯಾಗಿ ಬೆಳೆಯುತ್ತಿರುವಂತೆಯೇ ಪ್ರಪಂಚದಲ್ಲಿರುವ ಸಕಲ ದೇವ, ಮಾನವ, ಪಶು, ಪಕ್ಷಿ, ಕ್ರಿಮಿ, ಕೀಟಾದಿಗಳೂ ಆಡುವ ಭಾಷೆಗಳು ಉಚ್ಚರಿಸುವ ಸಕಲ ಶಬ್ಧಗಳೂ ತಾನೇ ತಾನಾಗಿ ಹುಟ್ಟಿಬಂದಿದೆ, ಎಂಬುದಾಗಿ ಈ ಗ್ರಂಥದಿಂದ ತಿಳಿದುಬರುತ್ತದೆ. ನಾನು ಸರ್ವಭಾಷಾಮಯಿ ಸಿರಿಭೂವಲಯದ ಸಿದ್ಧಾಂತ ಗ್ರಂಥ ರಚನೆ ಬಗ್ಗೆ ಸ್ವಲ್ಪ ವಿವರಣೆಯನ್ನು ತಿಳಿದುಕೊಳ್ಳೋಣ. ಈ ಸಿದ್ಧಾಂತ ಗ್ರಂಥವು ಅಕ್ಷರಗಳಿಂದ ಬರೆದಿಲ್ಲ. ಅಂಕಿಗಳಿಂದ ಬರೆಯಲ್ಪಟ್ಟಿದೆ ಎಂದು ಮೊದಲೆ ತಿಳಿದಿದ್ದೇವೆ. ಕನ್ನಡ ಅಂಕಿಗಳಿಂದ ಕೂಡಿದ ಚಕ್ರವು ಭಗವಂತನಿದ ಒಂದು ವಿಧವಾದ ಗಣಿತ ಸಿದ್ಧಾಂತದ ಮೂಲಕ ದಿವ್ಯ ಧ್ವನಿಯಾಗಿ ಮೊದಲೇ ಸೃಷ್ಟಿಯಾಗಿದೆಯೆಂದೂ ಅದೇ ಇಡೀ ಪ್ರಪಂಚಕ್ಕೆಲ್ಲಾ ಸಕಲ ಭಾಷೆಗಳನ್ನು ಸಮಸ್ತ ಧರ್ಮಗಳನ್ನು ಒಳಗೊಂಡು ಬೆಳೆದು ಬರುತ್ತಿದೆಯೆಂದೂ ಅದನ್ನೆ ಶ್ರೀ ಕುಮುದೇಂದು ಆಚಾರ್ಯರು ಅಂಕಾಕ್ಷರ ವಿಜ್ಞಾನ ಮತ್ತು

ಚಕ್ರ ಬಂಧಗಳ ಮೂಲಕ ಬಹುಕಾಲದ ಹಿಂದೆಯೇ ಪ್ರಪಂಚಕ್ಕೆ ಒಂದು ಪ್ರತ್ಯೇಕ್ಷ ವಿಶ್ವರೂಪ ದರ್ಶನಮಾಡಿದ್ದಾರೆಂಬುದನ್ನು ಈ ಗ್ರಂಥದಲ್ಲಿ ತಿಳಿಯಬಹುದಾಗಿದೆ.

ಈ ಕಾವ್ಯವು ಯಾವುದೇ ಲಿಪಿಯಲ್ಲಿ ಬರೆಯಲಾಗಿಲ್ಲ ಕೇವಲ ಕನ್ನಡ ಅಂಕಿಗಳಿಂದ ಕೂಡಿದ ಚಕ್ರ ಹೀಗಿದೆ.

## ಮೂಲಪ್ರತಿ (ನಕಲು)

ಇದು ಮೂಲಚಕ್ರ, ಕನ್ನಡದ ಮೂಲಚಕ್ರವನ್ನು ಅನುಸರಿಸಿ ಜನರಿಗೆ ತಿಳಿಸಲು ಅನುಕೂಲವಾಗುವಂತೆ ಇಂಗ್ಲಿಷ್‌ನಲ್ಲಿ ಬರೆದಿದೆ. ಅಂಕಿಗಳಿಂದ ಕೂಡಿದ ಚಕ್ರವನ್ನು ಗಮನಿಸಿದಾಗ ಈ ಚಕ್ರಗಳಲ್ಲಿ ಅಡ್ಡವಾಗಿ 27 ಅಂಕಿಗಳು ಉದ್ದವಾಗಿ 27 ಅಂಕಿಗಳು ಒಟ್ಟು ಇಡೀ ಚಕ್ರದಲ್ಲಿ 729 (27X27=729) ಅಂಕಿಗಳಿಂದ ತುಂಬಲ್ಪಟ್ಟಿವೆ. ಈ 729

# ಅಕ್ಷರ ಚಕ್ರ

Start

↓

| | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಸ್ | ಓ | ಅ | ಎ | ಅ | ಕ್ | ಕ್ | ಅ | ಅ | ವ್ | ಸ್ | ಇ | ವ್ | ಅ | ಅ | ನ್ | ಎ | ಥ್ | ಅ | ಉ | ಎ | ಅ | ಅ | ಉ | ವ್ | ಅ | [illegible] |
| ಯ್ | ರ್ | ನ್ | ಕ್ | ಅ | ನ್ | ದ್ | ಕ್ | ಉ | ಇ | ಸ್ | ಧ್ | ಇ | ದ್ | ಅ | ಗ್ | ನ್ | ನ್ | ದ್ | ಣ್ | ಯ್ | ಕ್ | ಭ್ | ಅ | ಮ್ | ಅ | [illegible] |
| ಅ | ಓ | ಅ | ಗ್ | ಅ | ಅ | ಅ | ಲ್ | ಗ್ | ಅ | ಉ | ದ್ | ನ್ | ಮ್ | ಅ | ಇ | ಅ | ನ್ | ಅ | ಅ | ಅ | ಅ | ಯ್ | ಅ | ಮ್ | ಸ್ | [illegible] |
| ಸ್ | ಗ್ | ಅ | ಲ್ | ಲ್ | ಳ್ | ಎ | ಅ | ಯ್ | ಹ್ | ಅ | ಇ | ಎ | ನ್ | ಪ್ | ದ್ | ಎ | ವ್ | ವ್ | ತ್ | ದ್ | ಅ | ವ್ | ಅ | ಇ | ಅ | [illegible] |
| ನ್ | ದ್ | ಅ | ಅ | ಒ | ಗ್ | ಭ್ | ಅ | ಅ | ವ್ | ಟ್ | ಗ್ | ಇ | ಅ | ಅ | ವ್ | ಅ | ಅ | ಎ | ಅ | ಶ್ | ಉ | ವ್ | ವ್ | ಅ | ಒ | ಅ |
| ರ್ | ಮ್ | ಮ್ | ದ್ | ಅ | ಉ | ಲ್ | ಪ್ | ಅ | ಷ್ | ಮ್ | ಜ್ | ಕ್ | ಲ್ | ಅ | ಟ್ | ದ್ | ಗ್ | ಲ್ | ಇ | ನ್ | ಉ | ದ್ | ಟ್ | ದ್ | ಟ್ | ಅ |
| ಅ | ಅ | ಅ | ಕ್ | ಳ್ | ವ್ | ಲ್ | ಭ್ | ರ್ | ಅ | ಅ | ಅ | ಅ | ಣ್ | ಅ | ಇ | ಇ | ಅ | ತ್ | ಎ | ನ್ | ಉ | ಅ | ಳ್ | ಇ | ಭ್ | ಇ |
| ಕ್ | ಯ್ | ನ್ | ಒ | ಊ | ಅ | ಯ್ | ಸ್ | ಟ್ | ಉ | ತ್ | ಡ್ | ಅ | ಮ್ | ಸ್ | ರ್ | ಗ್ | ಅ | ದ್ | ಎ | ಅ | ಕ್ | ಓ | ಬ್ | ಉ | ತ್ | ತ್ |
| ಅ | ಅ | ದ್ | ಭ್ | ಗ್ | ಅ | ಮ್ | ಷ್ | ಪ್ | ಸ್ | ನ್ | ರ್ | ಇ | ಇ | ಅ | ನ್ | ದ್ | ನ್ | ವ್ | ಕ್ | ಅ | ದ್ | ಅ | ಳ್ | ಉ | ಉ | ಉ |
| ಲ್ | ಅ | ಯ್ | ನ್ | ಫ್ | ಅ | ಅ | ಉ | ಅ | ಅ | ಅ | ಹ್ | ಪ್ | ವ್ | ಅ | ಅ | ಎ | ಅ | ಅ | ರ್ | ಅ | ಮ್ | ಏ | ಗ್ | ರ್ | ದ್ | ದ್ |
| ಸ್ | ವ್ | ಮ್ | ಅ | ದ್ | ಅ | ರ್ | ಶ್ | ಮ್ | ಕ್ | ಅ | ಅ | ಅ | ಮ್ | ರ್ | ಇ | ತ್ | ಹ್ | ಪ್ | ಕ್ | ಅ | ಎ | ಓ | ಊ | ಯ್ | ಉ | ಅ |
| ಅ | ಅ | ಯ್ | ಮ್ | ತ್ | ಓ | ಅ | ಇ | ಎ | ಮ್ | ಥ್ | ರ್ | ಅ | ಅ | ಣ್ | ಉ | ಅ | ಉ | ನ್ | ಗ್ | ಕ್ | ಪ್ | ನ್ | ಅ | ರ್ | ಮ್ | ಎ |
| ದ್ | ರ್ | ಓ | ಇ | ಕ್ | ದ್ | ದ್ | ಗ್ | ಅ | ಸ್ | ಅ | ವ್ | ಕ್ | ಅ | ರ್ | ಯ್ | ಟ್ | ಅ | ಅ | ಅ | ಕ್ | ಲ್ | ಡ್ | ಹ್ | ಇ | ಬ್ | ಕ್ |
| ಅ | ಳ್ | ನ್ | ಅ | ಅ | ಇ | ಏ | ದ್ | ಅ | ವ್ | ಅ | ಮ್ | ವ್ | ಭ್ | ಅ | ನ್ | ಲ್ | ಲ್ | ದ್ | ಉ | ಅ | ರ್ | ಅ | ವ್ | ಉ | ಅ | ಅ |
| ಓ | ಇ | ಯ್ | ರ್ | ಸ್ | ಪ್ | ಳ್ | ವ್ | ಅ | ನ್ | ಓ | ಅ | ಅ | ಲ್ | ಎ | ಅ | ಅ | ನ್ | ಡ್ | ರ್ | ಎ | ಮ್ | ಅ | ನ್ | ಹ್ | ತ್ | ಹ್ |
| ದ್ | ಎ | ತ್ | ಅ | ಉ | ನ್ | ಅ | ಉ | ಅ | ಇ | ರ್ | ರ್ | ಅ | ತ್ | ಕ್ | ಕ್ | ಉ | ಅ | ಅ | ಉ | ಮ್ | ಗ್ | ಅ | ಇ | ನ್ | ಇ | ಳ್ |
| ಣ್ | ಅ | ರ್ | ಳ್ | ಅ | ಕ್ | ಅ | ದ್ | ಣ್ | ಈ | ಪ್ | ವ್ | ಅ | ಅ | ಅ | ಮ್ | ರ್ | ಉ | ಅ | ಅ | ಅ | ವ್ | ವ್ | ಅ | ತ್ | ಅ | ಅ |
| ವ್ | ತ್ | ಒ | ದ್ | ವ್ | ತ್ | ಅ | ಅ | ವ್ | ಅ | ಊ | ಪ್ | ಸ್ | ಸ್ | ಋ | ಎ | ಯ್ | ಲ್ | ಯ್ | ಪ್ | ಅ | ಅ | ಧ್ | ಅ | ಗ್ | ಯ್ | ಅ |
| ನ್ | ದ್ | ಅ | ಅ | ರ್ | ವ್ | ವ್ | ಅ | ಲ್ | ಭ್ | ಇ | ಎ | ಉ | ಳ್ | ಗ್ | ಎ | ಅ | ಅ | ಇ | ಮ್ | ಮ್ | ಇ | ರ್ | ನ್ | ಅ | ಟ್ | ಅ |
| ಅ | ರ್ | ಹ್ | ವ್ | ರ್ | ಅ | ಹ್ | ಅ | ಅ | ಎ | ಡ್ | ಟ್ | ಏ | ಅ | ನ್ | ವ್ | ಚ್ | ಲ್ | ಅ | ಅ | ಸ್ | ಪ್ | ಅ | ಯ್ | ಉ | ಅ | ಅ |
| ಅ | ಮ್ | ಎ | ಅ | ಹ್ | ಅ | ಗ್ | ಯ್ | ಗ್ | ಉ | ನ್ | ಳ್ | ಳ್ | ಒ | ಊ | ಳ್ | ದ್ | ಸ್ | ರ್ | ಅ | ಅ | ಣ್ | ರ್ | ನ್ | ಯ್ | ಮ್ | ಯ್ |
| ಎ | ಗ್ | ಅ | ಇ | ಮ್ | ನ್ | ವ್ | ಅ | ಕ್ | ಎ | ಅ | ಒ | ಸ್ | ಭ್ | ಅ | ಅ | ಉ | ಕ್ | ಯ್ | ಹ್ | ಉ | ಅ | ಎ | ಎ | ಅ | ಅ | ಷ್ |
| ಇ | ಯ್ | ವ್ | ಅ | ಮ್ | ಅ | ಳ್ | ಮ್ | ಟ್ | ಗ್ | ದ್ | ಉ | ಅ | ಗ್ | ವ್ | ಎ | ಅ | ಅ | ಅ | ಗ್ | ಪ್ | ವ್ | ರ್ | ರ್ | ಲ್ | ಕ್ | ದ್ |
| ಅ | ನ್ | ನ್ | ಅ | ಕ್ | ಒ | ಅ | ನ್ | ಅ | ಅ | ದ್ | ಧ್ | ಅ | ಅ | ನ್ | ಯ್ | ಲ್ | ಮ್ | ಅ | ಅ | ಉ | ತ್ | ಅ | ಅ | ಅ | ಅ | ತ್ |
| ಅ | ಇ | ಯ್ | ಅ | ದ್ | ತ್ | ಎ | ಲ್ | ಮ್ | ಇ | ನ್ | ಲ್ | ದ್ | ಒ | ಭ್ | ವ್ | ಅ | ಟ್ | ಳ್ | ಗ್ | ಅ | ಕ್ | ವ್ | ಳ್ | ವ್ | ಕ್ | [illegible] |
| ಇ | ಎ | ಥ್ | ಅ | ಅ | ಎ | ಅ | ಅ | ಅ | ಅ | ಅ | ನ್ | ಸ್ | ಇ | ಊ | ಟ್ | ಷ್ | ಅ | ಅ | ಪ್ | ಅ | ಉ | ಒ | ಅ | ಅ | ಅ | [illegible] |
| ಮ್ | ಇ | ಗ್ | ವ್ | ಯ್ | ಮ್ | ರ್ | ಅ | ಗ್ | ಮ್ | ಅ | ಎ | ರ್ | ಉ | ಷ್ | ಅ | ಗ್ | ರ್ | ಅ | ವ್ | ಭ್ | ಯ್ | ವ್ | ಶ್ | ವ್ | ಇ | [illegible] |

↓

End

*ಅಂಕಗಳನ್ನು ಅನುಕ್ರಮವಾಗಿ ಅಕ್ಷರಗಳಿಗೆ ಪರಿವರ್ತಿಸಿದಾಗ ಬರುವ ಅಕ್ಷಗಗಳ ಚಕ್ರ

ಪರಿಕಲ್ಪನೆ : ಪುಸ್ತಕ ಶಕ್ತಿ

ಮನೆಗಳನ್ನು ಯಾವುದೋ ಒಂದು ಕ್ರಮದಲ್ಲಿ ನಮಗೆ ತಿಳಿದಿರುವ ಕ್ರಮದಲ್ಲಿ ಸುಲಭವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಈ ಚಕ್ರವನ್ನು ನಾವು ಹೇಗೆ ತಿಳಿದುಕೊಳ್ಳಬೇಕು ಎಂಬುದರ ಬಗ್ಗೆ ಮೊದಲೇ ಹೇಳಿದಂತೆ ಶ್ರೀಮಾನ್ ಶಾಸ್ತ್ರಿಗಳು ವರ್ಷಗಳೇ ಕಳೆದರು ತಿಳಿಯಲಿಲ್ಲ. ಒಂದು ದಿನ ಶಾಸ್ತ್ರಿಗಳಿಗೆ ಜ್ಞಾನೋದಯವಾಗಿ ಕಂಡು ಹಿಡಿದಿದ್ದಾರೆ. ಈ ಅಂಕಿಗಳಿಗೆ ಏನು ಅರ್ಥವೆಂಬುದನ್ನು ಸಂಶೋಧನೆಯ ನಂತರ ಹೀಗೆ ನಿರ್ಧರಿಸಲಾಗಿದೆ ಇದೇ ಅಂಕಾಕ್ಷರ ವಿಜ್ಞಾನ (ಪುಟ-9)

ಚಕ್ರವನ್ನು ಚಕ್ರಬಂಧದಲ್ಲಿ ಓದುವ ಕ್ರಮ - ಉದಾಹರಣೆ

Start ↓ (n)

| | a | b | c | d | e | f | g | h | i | j | k | l | m | n | o | p | q | r | s | t | u | v | w | x | y | z | z1 |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| 1 | 59 | 23 | 1 | 16 | 1 | 28 | 28 | 1 | 1 | 56 | 59 | 4 | 56 | 1 | 1 | 47 | 16 | 34 | 1 | 7 | 16 | 1 | 1 | 7 | 56 | 1 | 60 |
| 2 | 53 | 54 | 47 | 28 | 1 | 47 | 45 | 28 | 7 | 4 | 59 | 41 | 4 | 45 | 1 | 30 | 47 | 47 | 45 | 42 | 53 | 28 | 51 | 1 | 52 | 1 | 1 |
| 3 | 1 | 22 | 1 | 30 | 2 | 1 | 2 | 55 | 30 | 1 | 7 | 45 | 47 | 52 | 1 | 4 | 1 | 47 | 1 | 1 | 1 | 1 | 53 | 1 | 52 | 59 | 5 |
| 4 | 59 | 30 | 2 | 55 | 55 | 13 | 16 | 2 | 53 | 60 | 1 | 4 | 16 | 47 | 48 | 45 | 16 | 56 | 56 | 43 | 45 | 1 | 56 | 1 | 4 | 1 | 13 |
| 5 | 47 | 45 | 1 | 1 | 22 | 30 | 51 | 1 | 2 | 56 | 38 | 30 | 4 | 1 | 1 | 56 | 1 | 1 | 16 | 1 | 57 | 7 | 56 | 56 | 1 | 22 | 1 |
| 6 | 54 | 52 | 52 | 45 | 1 | 7 | 55 | 48 | 1 | 58 | 52 | 35 | 28 | 55 | 1 | 38 | 45 | 30 | 55 | 4 | 47 | 7 | 45 | 38 | 45 | 38 | 1 |
| 7 | 1 | 1 | 1 | 28 | 13 | 56 | 55 | 51 | 54 | 1 | 1 | 1 | 1 | 42 | 2 | 4 | 4 | 1 | 43 | 16 | 47 | 7 | 1 | 13 | 4 | 51 | 4 |
| 8 | 28 | 53 | 47 | 22 | 8 | 1 | 53 | 59 | 38 | 7 | 43 | 40 | 1 | 52 | 59 | 54 | 30 | 1 | 45 | 16 | 1 | 28 | 23 | 50 | 7 | 43 | 43 |
| 9 | 1 | 2 | 45 | 51 | 30 | 1 | 52 | 58 | 48 | 59 | 47 | 54 | 4 | 4 | 1 | 47 | 45 | 47 | [illegible] | 28 | 1 | 45 | 1 | 13 | 7 | 7 | 7 |
| 10 | 55 | 1 | 53 | 47 | 56 | 1 | 1 | 7 | 1 | 1 | 2 | 60 | 48 | 56 | 1 | 1 | 16 | 1 | 1 | 54 | 1 | 52 | 17 | 30 | 54 | 45 | 45 |
| 11 | 59 | 56 | 52 | 1 | 45 | 1 | 55 | 28 | 52 | 28 | 1 | 2 | 1 | 52 | 54 | 4 | 43 | 60 | 48 | 28 | 1 | 16 | 23 | 8 | 53 | 7 | 1 |
| 12 | 2 | 1 | 53 | 52 | 43 | 23 | 2 | 4 | 16 | 52 | 44 | 54 | 1 | 2 | 42 | 7 | 1 | 7 | 47 | 30 | 28 | 48 | 47 | 1 | 54 | 52 | 16 |
| 13 | 45 | 54 | 23 | 4 | 28 | 45 | 45 | 30 | 1 | 59 | 1 | 56 | 28 | 2 | 54 | 53 | 38 | 2 | 2 | 1 | 28 | 55 | 40 | 60 | 4 | 50 | 28 |
| 14 | 2 | 13 | 47 | 1 | 1 | 4 | 17 | 45 | 1 | 56 | 1 | 52 | 56 | 51 | 1 | 47 | 55 | 55 | 45 | 7 | 2 | 54 | 1 | 56 | 7 | 1 | 1 |
| 15 | 23 | 4 | 53 | 54 | 59 | 48 | 13 | 56 | 1 | 47 | 23 | 1 | 2 | 55 | 16 | 1 | 1 | 47 | 40 | 54 | 16 | 52 | 1 | 47 | 60 | 43 | 60 |
| 16 | 45 | 16 | 43 | 1 | 7 | 47 | 1 | 7 | 1 | 4 | 54 | 54 | 1 | 43 | 28 | 28 | 7 | 1 | 2 | 7 | 52 | 30 | 1 | 4 | 47 | 4 | 13 |
| 17 | 42 | 1 | 54 | 13 | 1 | 28 | 1 | 45 | 42 | 5 | 48 | 56 | 1 | 1 | 1 | 52 | 54 | 7 | 1 | 1 | 2 | 56 | 56 | 2 | 43 | 1 | 1 |
| 18 | 56 | 43 | 22 | 45 | 56 | 43 | 2 | 2 | 56 | 1 | 8 | 48 | 59 | 59 | 7 | 16 | 53 | 55 | 53 | 48 | 1 | 1 | 46 | 2 | 30 | 53 | 1 |
| 19 | 47 | 45 | 1 | 2 | 54 | 56 | 56 | 2 | 55 | 51 | 4 | 16 | 7 | 13 | 30 | 16 | 1 | 1 | [illegible] | 52 | 52 | 4 | 54 | 47 | 2 | 38 | 1 |
| 20 | 1 | 54 | 60 | 56 | 54 | 1 | 60 | 1 | 1 | 16 | 40 | 38 | 17 | 1 | 47 | 56 | 33 | 55 | 1 | 1 | 59 | 48 | 1 | 53 | 7 | 1 | 1 |
| 21 | 1 | 52 | 16 | 1 | 60 | 1 | 30 | 53 | 30 | 7 | 47 | 13 | 13 | 22 | 8 | 13 | 45 | 59 | 54 | 1 | 2 | 42 | 54 | 47 | 53 | 52 | 53 |
| 22 | 16 | 30 | 1 | 4 | 52 | 47 | 56 | 1 | 28 | 16 | 1 | 22 | 59 | 51 | 1 | 1 | 7 | 28 | 53 | 60 | 7 | 1 | 16 | 16 | 1 | 1 | 58 |
| 23 | 4 | 53 | 56 | 1 | 52 | 2 | 13 | 52 | 38 | 30 | 45 | 7 | 1 | 30 | 56 | 16 | 1 | 1 | 1 | 30 | 48 | 56 | 54 | 54 | 55 | 28 | 45 |
| 24 | 1 | 47 | 47 | 1 | 28 | 22 | 1 | 47 | 1 | 1 | 45 | 46 | 1 | 1 | 47 | 53 | 55 | 52 | 1 | 1 | 7 | 43 | 2 | 1 | 1 | 1 | 43 |
| 25 | 1 | 4 | 53 | 1 | 45 | 43 | 16 | 55 | 52 | 4 | 47 | 55 | 45 | 22 | 51 | 56 | 1 | 38 | 13 | 30 | 2 | 28 | 56 | 13 | 56 | 28 | 55 |
| 26 | 4 | 16 | 46 | 1 | 1 | 16 | 1 | 1 | 1 | 1 | 1 | 47 | 59 | 4 | 8 | 38 | 58 | 1 | 1 | 48 | 1 | 7 | 22 | 1 | 1 | 1 | 60 |
| 27 | 52 | 4 | 30 | 56 | 53 | 52 | 54 | 1 | 30 | 52 | 1 | 16 | 54 | 7 | 58 | 1 | 30 | 54 | 1 | 56 | 51 | 53 | 56 | 57 | 56 | 4 | 60 |

↓ End (n)

ಚಕ್ರ 1 -ಸಿರಿಭೂವಲಯ ಸಿದ್ಧಾಂತದ 'ಅ' ವಿಭಾಗದ ಮಂಗಲಪ್ರಾಭೃತ - ಮೊದಲನೆಯ ಸಾಲು ಓದುವ ಕ್ರಮ

| | | | | | | | | | | | | |
|---|---|---|---|---|---|---|---|---|---|---|---|---|
| n-1<br>ಅ | o-27<br>ಷ್ | p-26<br>ಟ್ | q-25<br>ಅ | r-24<br>ಮ್ | s-23<br>ಅ | t-22<br>ಹ್ | u-21<br>ಆ | v-20<br>ಪ್ | w-19<br>ರ್ | x-18<br>ಆ | y-17<br>ತ್ | z-16<br>ಇ |
| z1-15<br>ಹ್ | a-14<br>ಆ | b-13<br>ರ್ | c-12<br>ಯ್ | d-11<br>ಅ | e-10<br>ವ್ | f-9<br>ಐ | g-8<br>ಯ್ | h-7<br>ಭ್ | i-6<br>ಅ | j-5<br>ವ್ | k-4<br>ಅ | l-3<br>ದ್ |
| m-2<br>ಇ | m-3<br>ನ್ | n-2<br>ದ್ | o-1<br>ಅ | p-27<br>ಅ | q-26<br>ಷ್ | r-25<br>ಟ್ | s-24<br>ಅ | t-23<br>ಗ್ | u-22<br>ಉ | v-21<br>ಣ್ | w-20<br>ಅ | x-19<br>ನ್ |
| y-18<br>ಗ್ | z-17<br>ಅ | z1-16<br>ಳ್ | a-15<br>ಓ | b-14<br>ಳ್ | c-13<br>ಓ | d-12<br>ಮ್ | e-11<br>ದ್ | f-10<br>ಅ | g-9<br>ಮ್ | h-8<br>ಸ್ | i-7<br>ರ್ | j-6<br>ಷ್ |
| k-5<br>ಟ್ | l-4<br>ಇ | l-5<br>ಗ್ | m-4<br>ಎ | n-3<br>ಮ್ | o-2<br>ಅ | p-1<br>ನ್ | q-27<br>ಗ್ | r-26<br>ಅ | q-27<br>ಳ್ | t-24<br>ಅ | u-23<br>ಪ್ | v-22<br>ಅ |
| w-21<br>ರ್ | x-20<br>ಯ್ | y-19<br>ಆ | z-18<br>ಯ್ | z1-17<br>ಅ | a-16<br>ದ್ | b-15<br>ಇ | c-14<br>ನ್ | d-13<br>ಇ | e-12<br>ತ್ | f-11<br>ಅ | g-10<br>ಅ | h-9<br>ಷ್ |
| i-8<br>ಟ್ | j-7<br>ಅ | k-6<br>ಮ್ | k-7<br>ಅ | l-6<br>ಜ್ | m-5<br>ಇ | n-4<br>ನ್ | o-3<br>ಅ | p-2<br>ಗ್ | q-1<br>ಎ | r-27<br>ರ್ | s-26<br>ಅ | t-25<br>ಗ್ |
| u-24<br>ಉ | v-23<br>ವ್ | w-22<br>ಎ | x-21<br>ನ್ | y-20<br>ಉ | | | | | | | | |

ಮೇಲಿನ ಅಕ್ಷರಗಳನ್ನು ಸೇರಿಸಿ ಓದಿದಾಗ ಬರುವ ಶ್ಲೋಕ:

ಅಷ್ಟಮಹಾಪ್ರಾತಿಹಾರ್ಯವೈಭವದಿಂದ ಅಷ್ಟಗುಣಂಗಳೊಳ್ ಒಂದಮ್ । ಸೃಷ್ಟಿಗೆ ಮಂಗಳಪರ್ಯಾಯದಿನಿತ ಅಷ್ಟಮಜಿನಗೆರಗುವೆನು ॥

## ಸಿರಿಭೂವಲಯದ ಚಕ್ರಗಳಲ್ಲಿರುವ ಅಂಕಾಕ್ಷರಗಳ ಸೂಚಿ:

| | | | | | | | |
|---|---|---|---|---|---|---|---|
| ೧ | 1 | ಅ | A | ೩೩ | 33 | ಚ್ | CH |
| ೨ | 2 | ಆ | AA | ೩೪ | 34 | ಛ್ | CHH |
| ೩ | 3 | ಆಾ | AAA | ೩೫ | 35 | ಜ್ | J |
| ೪ | 4 | ಇ | E | ೩೬ | 36 | ಝ್ | JH |
| ೫ | 5 | ಈ | EE | ೩೭ | 37 | ಞ್ | NY |
| ೬ | 6 | ಈೀ | EEE | ೩೮ | 38 | ಟ್ | T |
| ೭ | 7 | ಉ | U | ೩೯ | 39 | ಠ್ | TTH |
| ೮ | 8 | ಊ | UO | ೪೦ | 40 | ಡ್ | D |
| ೯ | 9 | ಊೂ | UOO | ೪೧ | 41 | ಢ್ | DDH |
| ೧೦ | 10 | ಋ್ | R | ೪೨ | 42 | ಣ್ | N |
| ೧೧ | 11 | ಋ | RU | ೪೩ | 43 | ತ್ | TH |
| ೧೨ | 12 | ಋೂ | ROO | ೪೪ | 44 | ಥ್ | THH |
| ೧೩ | 13 | ಳ್ | L | ೪೫ | 45 | ದ್ | DH |
| ೧೪ | 14 | ಳು | LU | ೪೬ | 46 | ಧ್ | DHH |
| ೧೫ | 15 | ಳೂ | LOO | ೪೭ | 47 | ನ್ | N |
| ೧೬ | 16 | ಎ | A | ೪೮ | 48 | ಪ್ | P |
| ೧೭ | 17 | ಏ | EA | ೪೯ | 49 | ಫ್ | PH |
| ೧೮ | 18 | ಏೀ | EAA | ೫೦ | 50 | ಬ್ | B |
| ೧೯ | 19 | ಐ | AI | ೫೧ | 51 | ಭ್ | BH |
| ೨೦ | 20 | ಐೃ | AII | ೫೨ | 52 | ಮ್ | M |
| ೨೧ | 21 | ಐೃ, | AIII | ೫೩ | 53 | ಯ್ | Y |
| ೨೨ | 22 | ಒ | O | ೫೪ | 54 | ರ್ | R |
| ೨೩ | 23 | ಓ | OO | ೫೫ | 55 | ಲ್ | L |
| ೨೪ | 24 | ಓೀ | OOO | ೫೬ | 56 | ವ್ | V |
| ೨೫ | 25 | ಔ | OU | ೫೭ | 57 | ಶ್ | SH |
| ೨೬ | 26 | ಔಾ | OUU | ೫೮ | 58 | ಷ್ | SHH |
| ೨೭ | 27 | ಔಾಾ | OUUU | ೫೯ | 59 | ಸ್ | S |
| ೨೮ | 28 | ಕ್ | K | ೬೦ | 60 | ಹ್ | H |
| ೨೯ | 29 | ಖ್ | KH | ೬೧ | 61 | ಂ | AM |
| ೩೦ | 30 | ಗ್ | G | ೬೨ | 62 | ಃ | AH |
| ೩೧ | 31 | ಘ್ | GH | ೬೩ | 63 | ◦°◦ | AK |
| ೩೨ | 32 | ಙ್ | NG | ೬೪ | 64 | ಃಃ | PHK |

ಪರಿಕಲ್ಪನೆ: ಪುಸ್ತಕಶಕ್ತಿ

ಒಟ್ಟು 1 ರಿಂದ 27 ರವರೆಗೆ ಸ್ವರಗಳು, 28 ರಿಂದ 52ರವರೆಗೆ ವರ್ಗೀಯ ವ್ಯಂಜನಗಳು

23 ರಿಂದ 60 ರವರೆಗೆ ಅವರ್ಗೀಯ ವ್ಯಂಜನಗಳು

ಕ್-ವರ್ಗ, ಚ್-ವರ್ಗ, ಟ್-ವರ್ಗ, ತ್-ವರ್ಗ, ಪ್-ವರ್ಗಗಳನ್ನು ಬಾಲ್ಯದಲ್ಲಿ ಅಭ್ಯಾಸ ಮಾಡಿದಂತೆ ಇಲ್ಲಿಯೂ ಸಹ ಅಂಕಿಗಳಿಗೆ ಒಂದೊಂದು ಅಕ್ಷರಗಳನ್ನು ನಿರ್ಧರಿಸಲಾಗಿದೆ

61 ರಿಂದ 62 ಯೋಗವಾಹಕಗಳು, 61 ಅನುಸ್ವಾರ 'ಂ', 62 ವಿಸರ್ಗ ಅಹ್,

63 ಮತ್ತು 64 ಯೋಗವಾಹಕಗಳು, 63 ಉಪಧ್ಮಾನಿಯ ಅಕ್, 64 ಜಿಹ್ವಾಮೂಲೀಯ ಫ್‌ಹ್

ಈ ರೀತಿ 64 ಅಂಕಿಗಳು ಈ ಚಕ್ರದಲ್ಲಿ ಇರುವುದರಿಂದ 64 ಸ್ವರಗಳನ್ನು ನಿರ್ಧರಿಸಲಾಗಿದೆ ಚಕ್ರವನ್ನು ಓದುವ ಕ್ರಮವನ್ನು ಕಷ್ಟಪಟ್ಟು ಕಂಡುಹಿಡಿಯಲಾಗಿದೆ. ಈ ಭೂವಲಯದಲ್ಲಿ ಬಂದಿರುವ 12,000 ಚಕ್ರಗಳನ್ನು 40 ಬಂಧಗಳಲ್ಲಿ ಓದಬೇಕೆಂದು ಭೂವಲಯದ ಸಾಹಿತ್ಯದಿಂದಲೇ ತಿಳಿದು ಬರುತ್ತದೆ. ಅದರಲ್ಲಿ ಶ್ರೇಣಿ ಬಂಧ ಅಥವಾ ಶ್ರೇಢಿಬಂಧ ಎನ್ನುವ ಒಂದು ಪದ್ಧತಿಯಿಂದ ಓದಿದಾಗ ಕನ್ನಡ ಸಾಹಿತ್ಯವು ರಾಶಿ ರಾಶಿಯಾಗಿ ಹರಿದುಬರುತ್ತದೆ.

ಮೊದಲನೆಯ ಚಕ್ರ ಓದುವ ಕ್ರಮದಿಂದ ಬರುವ ಸಾಹಿತ್ಯಸೃಷ್ಟಿಯೇ **ಅಷ್ಟಮ್ಅಹ್ ಪ್ರತಿಹಾರ್ಯ ವೈಭವದಿಂದ ಎಂದಾಯಿತು. ಅಷ್ಟಗುಣಗಳ್ ಒಂದಮ್ ಸೃಷ್ಟಿಗೆ ಮಂಗಲ ಪರ್ಯಾಯದಿಮಿತ ಅಷ್ಟಮಜಿನಗೆಂಗುವೆನು** ಇಲ್ಲಿಗೆ ಒಂದು ಸಾಲು ಪದ್ಯವಾಗಿದೆ. ಭೂವಲಯದ ಚಕ್ರದಲ್ಲಿನ ಅಕ್ಷರಗಳನ್ನು ಬಿಡಿಸಿ ಓದುವ ಕ್ರಮವನ್ನು ಈ ರೀತಿ ವಿವರಿಸಲಾಗಿದೆ. (ಪುಟ-8)

## ಸಾಹಿತ್ಯವನ್ನು ಓದುವ ಕ್ರಮ

ಉದಾಹರಣೆಯೊಂದಿಗೆ ಸಿರಿ ಭೂವಲಯದಲ್ಲಿ ಇರುವಂತಹ ಅಕ್ಷರಗಳನ್ನು ಹೀಗೆ ಓದಬೇಕೆಂಬುದನ್ನು ತೋರಿಸಿದ್ದಾರೆ.

RAMA- ರಾಮ - ರ್ ಆಮ್ ಅ ಸ್ವರಗಳನ್ನು ಬಿಡಿಸಿ ಭೂವಲಯದಲ್ಲಿ ಬರೆಯಲಾಗಿದೆ.

PRAKASH- ಪ್ರಕಾಶ್- ಪರ್ ಅಕ್ಅಶ್

**ಅಷಟ್ ಅಮ್ ಅಹ್ಆ (ಅಷ್ಟಮಹಾ)**

**ಅಷ್ಟ ಮ ಹಾ**

**ಪ್ರ್ ಆತ್ ಇಹ್ ಆರ್ಯ್ಅ (ಪ್ರಾತಿಹಾರ್ಯ)**

**ಪ್ರಾ ತಿ ಹಾ ರ್ಯ**

ಈ ರೀತಿ ಅಕ್ಷರಗಳನ್ನು ಜೋಡಿಸಿಕೊಂಡು ಭೂವಲಯವನ್ನು ಓದಬೇಕು ಇಡೀ ಭೂವಲಯುದಲ್ಲಿ ಸ್ವರಾಕ್ಷರಗಳನ್ನು ವ್ಯಂಜನಗಳನ್ನು ಬಿಡಿಸಿ ಬರೆಯಲಾಗಿದೆ. ಸಿರಿಭೂವಲಯವನ್ನು ಸುಲಭವಾಗಿ ಓದಲು ಸ್ವರಗಳನ್ನು ಮಾತ್ರ ಸೇರಿಸಲಾಗಿದೆ. ಒತ್ತರಗಳನ್ನು ಬಿಡಿಸಲಾಗಿದೆ.

1. ಅಷ್ಟ ಮಹಾಪ್ರಾತಿಹಾರ್ಯ ವಯ್ಭವದಿನ್ದ । ಅಷ್ಟಗುಣನ್ ಗಳೊಳ್ ಓಮ್ದಮ್ ॥ ಸೃಷ್ಟಗೆ ಮನ್ಗಲ ಪರ್ಯಾಯದಿನಿತ್ತ । ಅಷ್ಟಮ ಜಿನಗೆರಗುವೆನು ।

2. ಟ್‌ವಣೆಯ ಕೋಲು ಪುಸ್‌ತಕ ಪಿನ್‌ಛ ಪಾತ್‌ಯ । ಅವತಾರದಾ ಕಮನ್‌ಡಲದ ॥ ನವಕಾರ ಮನ್‌ತ್‌ರಸಿದ್‌ಧಿಗೆ ಕಾರಣವೆನ್‌ದು । ಭುವಲಯದೊಳುಪೇಳ್‌ದ ಮಹಿಮಾ ॥

3. ಟವಣೆಯೊಳಕ್ಷರ ದನ್‌ಕವ ಸ್‌ಥಾಪಿಸಿ। ದವಯುವವದೆ ಮಹಾವ್‌ರತವು ॥ ಅವರವರಿಗೆ ತರ್‌ಕ ಶಕ್‌ತಿಗೆ ವರವಾದ ನವಮನ್‌ಗಲದ ಭೂವಲಯ ॥

4. ವಿವಹವಾಣಿ ಓಮ್‌ಕಾರದತಿಶಯ ವಿಹನಿನ್‌ನ ಮಹವೀರವಾಣಿ ಎದ್‌ದೆನುವ॥ ಮ್ ಹಿಮೆಯ ಮನ್‌ಗಲಪ್‌ರಾಭ್‌ರುತವೆನ್‌ನುವ । ಮಹಸಿದ್‌ಧ ಕಾವ್‌ಯ ಭೂವಲಯ ॥

5. ಹಕವು ದ್ ವಿಸಮ್ ಯೋಗದೊಳಗೆ ಇಪ್‌ಪತ್‌ಎನ್‌ಟು । ಪ್ರಕಟದೊಳ್ ಅರವತ್‌ತಮ್ ಕೂಡೆ। ಸಕಲಾನ್ ಕದೊಳು ಬಿಟ್‌ಟ ಸೊನ್‌ನೆಯೆ ಎನ್‌ಟ್‌ಎನ್‌ಟು । ಸಕಲಾಗಮ ಏಳು ಭನ್‌ಗ ॥

6. ಕಮಲಗಳೇಳು ಮುನ್‌ದಕೆಪೋಗುತಿರ್‌ದಾಗ । ಕ್‌ರಮದೊಳಗೆರಡು ಕಾಲ್‌ನ್‌ನೂರು ॥ ತಮಲಾನ್ ಕಐದುಸೊನ್‌ನೆಯು ಆರು ಎರಡಯ್‌ದು । ಕಮಲಗನ್‌ಧ ಭೂವಲಯ ॥

7. ಮ್‌ಮಹ್‌ರುದಯುದೊಳಾ ಕಮಲಗಳ್ ಚಲಿಪಾಗ । ವಿಮಲಾನ್‌ಕ ಗೆಲುವನ್‌ದವ್ ಅದು ॥ ಸಮವನು ಬೆಸದೊಳು ಭಾಗಿಸೆ ಸೊನ್‌ನೆಯ ವಿಮಲಾಂಕ ಕಾವ್‌ಯ ಭೂವಲಯ ॥

8. ಮವಿರುದ್‌ಧ ಸಿದ್‌ದಾನ್‌ತವನು ಮಹಾವ್‌ರತಕೆನ್‌ದು । ನವಪದವಣುವ್‌ರತಕೆನ್‌ದು । ಸವಿಯಾಗಿಸಿ ಪ್‌ರಉಢ ಮೂಢರೀರ್‌ವರಿಗ್‌ಓಮ್‌ದೆ । ನವಪದ ಭಕ್‌ತಿ ಭೂವಲಯ ॥

9. ವಿಯಲಿಯ ಮಲಮೂಢ ದಮ್‌ಸಣುತ್‌ತಲಿಯಾ । ಜಯಪರಿಷಹವ್ ಇಫ್‌ಪತ್ ಎರಡಮ್ । ನಯಮ್ ಆಗ್‌ಗದಿನ್‌ದ ಗೆಲ್‌ದವರ ಸದ್‌ವಮ್‌ಶದ। ಸ್‌ವಯಮ್‌ಸಿದ್‌ಧ ಕಾವ್‌ಯ ಭೂವಲಯ ॥

10. ಯಲ ಯಲುದಿಕ್‌ಕುಗಳ್ ಹತ್‌ತನು ಭಟ್‌ಟೆಂಯ । ನಲವಿನಿಮ್ ಧರಿಸಿರ್‌ದ ಮುನಿಯು ॥ ಸಲುವ ದಿಗಮ್ ಬರನೆನ್‌ತೆನ್‌ದು ಕೇಳುವ । ಬಲಿದನ್ ಕಾವ್‌ಯ ಭೂವಲ ॥

ಕಲಿಯನ್‌ಕಕಾವ್ ಭೂವಲಯ ಬಲಶಾಲಿಗಳ ಭೂವಲಯ

## 6ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಅದ್ವೈತ, ದ್ವೈತ ಅನೇಕಾಂಕ ಮತ್ತು ಇತರ 363 ಮತ ಧರ್ಮ ಸಮನ್ವಯವನ್ನು ಹರಿಹರ ಜಿನ ಧರ್ಮ ವರ್ಣನೆಯನ್ನು ಮಾಡಿದೆ. ಮತ್ತು ಈ ಕಾವ್ಯದಿಂದ ಸರ್ವಾರ್ಥಸಿದ್ದಿಗಳೂ ಆಗುವುದಾಗಿ ಅಪಾರವಾಗಿ ಪ್ರಶಂಸಿಸಿದೆ.

## 7ನೇಯ ಅಧ್ಯಾಯ

ಈ ಅಧ್ಯಾಯದಲ್ಲಿ 24 ತೀರ್ಥಂಕರರ ಹೆಸರುಗಳನ್ನು, ಸಿದ್ಧರಸದ ಮಹಿಮೆಯನ್ನು ಪುಷ್ಪಾಯುರ್ವೇದದ 24 ಪುಷ್ಪಗಳ ಹೆಸರನ್ನು ನಾಲ್ಕೊಗದ ಸಿಂಹದ ಮಹಿಮೆಯನ್ನು ವರ್ಣಿಸಿದೆ.

## 8ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಎಲ್ಲಾ ತೀರ್ಥಂಕರ ವಾಹನಗಳಾದ ಸಿಂಹಗಳನ್ನು ಅವುಗಳ ಆಕಾರ, ರೂಪ, ಸ್ವಭಾವಗಳನ್ನೂ, ಆಯುಷ್ಯ ಸಾವುಗಳನ್ನು ಗಣಿತ ಶಾಸ್ತ್ರ ಪ್ರಕಾರ ವಿವರಿಸಿದೆ. ಕುಮುದೇಂದು ಮುನಿಗಳು ವಾಸವಾಗಿದ್ದ ಕ್ಷೇತ್ರವೆಂದು ತಿಳಿಯಲಾಗಿರುವ ನಂದೀ ಬೆಟ್ಟದ ವರ್ಣನೆಯನ್ನು ನಾಲ್ಕೊಗದ ಸಿಂಹ ಭರತಖಂಡದಲ್ಲಿ ಶುಭ ಚಿನ್ನೆಯೆಂಬುದನ್ನೂ ಮಹಾದೇವಿಯರಾದ ಚಕ್ರೇಶ್ವರಿ ಪುರುಷದತ್ತೆ, ಕಾಳಿ, ಗೌರಿ ಮುಂತಾದ 24 ಯಕ್ಷ ಯಕ್ಷಿಯರನ್ನೂ ಪ್ರಶಂಸಿಸಿದೆ.

## 9ನೇಯ ಅಧ್ಯಾಯ-

ಈ ಅಧ್ಯಾಯದಲ್ಲಿ ರಸಸಿದ್ದಿಗೆ ಬೇಕಾದ ಹಲವು ಪುಷ್ಪಗಳ ಹೆಸರನ್ನೂ ಕುಮುದೇಂದು ಮುನಿಗಳ, ವಂಶ, ಗೋತ್ರ, ಸೂತ್ರಾದಿಗಳನ್ನು ಮಾನ್ಯ ಖೇಟದ ದೊರೆ ಅಮೋಘವರ್ಷನ ಪ್ರಶಸ್ತಿಯನ್ನು ಮಾಡಲಾಗಿದೆ.

## 10ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಕುಮುದೇಂದುವು ಗುರುಗಳ ದಿವ್ಯವಾಣಿಯನ್ನು ಗಣಿತರೂಪದಲ್ಲಿ ಧರ್ಮಸಮನ್ವಯ ಮಾಡಿ ಸರ್ವಭಾಷೆಗಳನ್ನು ಅಂಕಾಕ್ಷರ ವಿಜ್ಞಾನದಲ್ಲಿ ತುಂಬಿರುವ ವಿಚಾರವನ್ನು ಪ್ರಶಂಸೆ ಮಾಡಲಾಗಿದೆ ಮತ್ತು ಗೀರ್ವಾಣಿ ಜಿನವಾಣಿ, ಓಂಕಾರ ಹ್ರೀಂಕಾರ ಮಂತ್ರಾಕ್ಷರಗಳನ್ನು ತಿಳಿಸಲಾಗಿದೆ.

## 11ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಓಂಕಾರದ ಹುಟ್ಟು ಬೆಳವಣಿಗೆ ಮಹಿಮೆ ಮತ್ತು ಬ್ರಾಹ್ಮೀ ಸೌಂದರಿಯರಿಗೆ ಕೊಟ್ಟ ಅಂಕಾಕ್ಷರಗಳ ವಿವರಣೆಯನ್ನು ಕೊಡಲಾಗಿದೆ.

## 12ನೇ ಅಧ್ಯಾಯ

ಈ ಅಧ್ಯಾಯದಲ್ಲಿ- ತೀರ್ಥಂಕರ ವಾಹನಗಳು ಲಾಂಛನಗಳು ಜಿನಸಮಯ ಪ್ರಶಂಸೆ, ಪುಷ್ಪಾಯುರ್ವೇದ ವೃಕ್ಷಗಳು ಈ ಕಾವ್ಯದ ಬಗ್ಗೆ ವಿದ್ವಾಂಸರುಗಳಿಗೆ ಪ್ರಶ್ನೆ ಮುಂತಾದವುಗಳನ್ನು ಹೇಳಿದೆ ಮತ್ತು ಈ ಅಧ್ಯಾಯದಿಂದ - 29ನೆಯ ಶ್ಲೋಕದಿಂದ- ಅಶ್ವಗತಿಯ ಅಂತರ್ ಸಾಹಿತ್ಯವನ್ನು ಗುರುತಿಸಲಾಗಿದೆ.

## 13ನೆ ಅಧ್ಯಾಯ

ಈ ಅಧ್ಯಾಯದಲ್ಲಿ ಸಾಧುಗಳ ವರ್ಣನೆ ಗುರುಸ್ತುತಿ, 9 ರಿಂದ ಭೂವಲಯ ಉತ್ಪತ್ತಿ ಕರ್ಮಾಟಕದ ಪ್ರಶಂಸೆ ಮಾಡಲಾಗಿದೆ.

## 14ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಮನದೋಷ, ತನುದೋಷ, ವಚನದೋಷನಿವಾರಣೆ ಗುರುಸ್ತುತಿ, ರಸಸಿದ್ಧಿ, ಪುಷ್ಪಾಯರ್ವೇದ, ಚರಕನ ಹಿಂಸಾತ್ಮಕಮತೆ ಖಂಡನೆ. ಸಿದ್ಧಾದಾಯಿಯರ ಸ್ತುತಿಗಳನ್ನು ಕೊಡಲಾಗಿದೆ.

## 15ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಭವನವಾಸಿಗಳಾದ ದೇವತೆಗಳ ವೈಭವವನ್ನು ಕಾಮಕಲಾ ವೈಭವವನ್ನು ಮಾಡಲಾಗಿದೆ.

## 16ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಸಿದ್ಧಾರ್ತ ಲಕ್ಷಣವನ್ನು ಅದರ ಸುಖವನ್ನೂ ಲೇಶ್ಯೆಯ ಗುಣರೂಪಗಳನ್ನು ಕೃಷ್ಣಾರ್ಜುನಗೀತೆ ಕುಮುದೇಂದು ಗೀತೆಯನ್ನು ಕೊಡಲಾಗಿದೆ.

ಈ ಅಧ್ಯಾಯದ 239 ನೇಯ ಶ್ಲೋಕದಿಂದ ಆರಂಭವಾಗಿ ಬರುವ ಅಂತರ್ ಸಾಹಿತ್ಯದ ಮಧ್ಯಮಾಕ್ಷರದಿಂದ ಮತ್ತೊಂದು ಅಂತರ್ ಸಾಹಿತ್ಯವು ಸರಸ್ವತೀ ಸ್ತೋರ್ತವಾಗಿ ಉದ್ಭವವಾಗುವುದು.

## 17ನೆಯ ಅಧ್ಯಾಯ

ಈ ಅಧ್ಯಾಯದಲ್ಲಿ ಈ ಕಾವ್ಯವು ಭಾರತ ಯುದ್ಧಾದಿಯ ಕಾವ್ಯವೆಂದೂ ಹೇಳಿದೆ. ಇದರಲ್ಲಿ ಕೃಷ್ಣ ಬಲಭದ್ರ ಭರತ ಗೊಮ್ಮಟರ ಉಪನಯನ ವಿಧಿಯನ್ನು

ಗೀತೋಪದೇಶವನ್ನೂ ಅಂಕಲೇಶ್ವರನ ವರ್ಣನೆಯನ್ನೂ, ಅಂಕಿಯ ಸ್ಥಾನಮಾನಗಳನ್ನು ಹೇಳಿದೆ ಮತ್ತು ಈ ಅಧ್ಯಾಯದ ಪ್ರತಿಯೊಂದು ಪದ್ಯದ 2ನೆಯ ಅಕ್ಷರದಿಂದ "ರಿದ್‌ಧಿಸಿದ್‌ಧಿಗೆ" ಎಂಬುದಾಗಿ ಇನ್ನೊಂದು ಅಂತರ್ ಕಾವ್ಯವು ಹುಟ್ಟುತ್ತದೆ.

## 18ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಓಂಕಾರ ವರ್ಣನೆ ಗೀತೆಗೆ ಸೂಕ್ಷಾರ್ಥ ಅಣು ವಿಜ್ಞಾನ ಅಷ್ಟ, ಕಶ್ಮ, ವೈಭವ, ಬ್ರಹ್ಮಗೀತೆ, ಹಾಲು, ಅನ್ನದ ಶಕ್ತಿ, ಮತ್ತು ಅದರ ಅಣುಶಕ್ತಿಯನ್ನು ವಿವರಿಸಲಾಗಿದೆ.

## 19ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಪ್ರತಿಯೊಂದು ಪದ್ಯದಲ್ಲಿಯೂ 10 ಅಕ್ಷರಗಳಿಂದ ಅಂತರ್ ಸಾಹಿತ್ಯವು ಪ್ರವಹಿಸುವುದು ಮತ್ತು ಭಗವದ್ಗೀತೆ 64 ಅಂಕಾಕ್ಷರ ವಿಜ್ಞಾನ ಅಣು ವಿಜ್ಞಾನ ಹರಿಹರಜಿನ ಪ್ರಶಸ್ತಿಯನ್ನು ವಿವರಿಸಲಾಗಿದೆ. ಶಂಕಾ ವಿಚಾರ ಯುದ್ಧವರ್ಣನೆ ಶತ್ರುಭಯ ನಿವಾರಣೆಯನ್ನು ಪ್ರಸ್ತಾಪಿಸಲಾಗಿದೆ. 241-27657

## 20ನೇ ಅಧ್ಯಾಯ

ಈ ಅಧ್ಯಾಯದಿಂದ ಪ್ರತಿಯೊಂದು ಪದ್ಯದಲ್ಲಿಯೂ ಸುಮಾರು 18 ಅಕ್ಷರಗಳಿಂದ ಕನ್ನಡ ಮತ್ತು ಸಂಸ್ಕೃತದಲ್ಲಿ ಅಂತರ್ ಸಾಹಿತ್ಯವು ಗ್ರಂಥಾಂತ್ಯದವರೆಗೂ ಪ್ರವಹಿಸುವುದು. ಭೂವಲಯವನ್ನು ಕಟ್ಟಿರುವ ಕ್ರಮದ ಹಿರಿಮೆಯುಈ ಅಧ್ಯಾಯದಿಂದ ಅನಂತವಾಗಿ ಪ್ರಕಟವಾಗುವುದು ಮತ್ತು ಇಲ್ಲಿಂದ ಮುಂದೆ ಎಲ್ಲಾ ಅಧ್ಯಾಯಗಳಲ್ಲಿಯೂ ಭಗವದ್ಗೀತೆಯೇ ಪ್ರಮುಖ್ಯವಾಗಿ ಅಮೋಘವಾಗಿ ವರ್ಣಿಸಲ್ಪಡುವುದು ಈ ಅಧ್ಯಾಯದಲ್ಲಿ ಕುರುಕ್ಷೇತ್ರ ವರ್ಣನೆ, ಚಿನ್ನದ ರೂಪು ಕರ್ಮದ ಲೇಖ, ಹಿಂಸೆಯ ವರ್ಜನೆ, ಜೀವನದ ವರ್ಣನೆ ಮುಂತಾದುವನ್ನು ಕೊಡಲಾಗಿದೆ.

## 21ನೇ ಅಧ್ಯಾಯ

ಈ ಅಧ್ಯಾಯದಲ್ಲಿ ವೇದತ್ರಯ ತಮಿಳು ಭಾಷೆ ಯ್ಂಟಪಯ ಲೆಕ್ಕ, ಶತ್ರುಂಜಯ, ಆಕಾರ ಅಂತರ್ ಶ್ಲೋಕ, ಉಪದೇಶ ಸಿದ್ಧಿ, ಜ್ಞಾನಸಿದ್ಧಿ, ಸಿದ್ದಿ ವಿದ್ಯೆ, ಜಾತಿಯ ಅಭಿಮಾನವರ್ಜನೆ ಮನಶುದ್ಧಿ ಪರಬ್ರಹ್ಮ ಸಾಕ್ಷಾತ್ಕಾರ ಅಸಿ ಆ ಉಸಾಸಿದ್ದಿ ಮುಂತಾದವುಗಳನ್ನು ವರ್ಣಿಸಿದೆ.

## 22ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಇಂದು ನಿನ್ನೆ ನಾಳೆ 27 ಭಂಗದ ಶ್ರೇಯೋಮಾರ್ಗ ಮೃಗವು ಸಿಂಹವಾಗಿ ದಾನವನು ಮಾನವನಾಗುವುದು ಗುರುವಿಗೆ ಕರ್ತವ್ಯ ಸೇವೆ ಅತಿಶಯದ ಭಗವದ್ಭಕ್ತಿ ಮುಂತಾಗಿ ಗೀತೋಪದೇಶ ಮಾಡಲಾಗಿದೆ.

## 23ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಬಾಳಿನ ಯುದ್ಧದಿಗೆಲ್ದು ಪರಮಾತ್ಮನಾಗುವುದು ಕರ್ಮಾಟಕರ ಶಾಶ್ವತ ಸುಖ ಅರ್‌ಹಂತರೂಪದ ಸರಸ್ವತೀ ವಾಣಿ, ವಿಜ್ಞಾನದಲ್ಲಿ ಬಾಳುವವರು ಬ್ರಹ್ಮ ಋಷಿಗಳು ವಿಶ್ವದ ಸರ್ವಜ್ಞಾತ್ವದ ಸಕಲ ವಿಜ್ಞಾನದ ಪಾಹುಡ, ಗೋಗ್ರಹಣ, ಮಾಯೆ ಮುಂತಾದುವನ್ನು ವಿವರಿಸಲಾಗಿದೆ.

## 24ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಗೀತಾಂಕದ ಗಾದೆ ಮನ್ಮನಾಭವಮದ್ಭಕ್ತಿ ಕೃಷ್ಣನು ಅರ್ಜುನನಿಗೆ ಸಬಲಯೋಗ ಮಾರ್ಗ ವಿವರಣೆಯನ್ನು ಹೇಳಿದುದು, ಯಜ್ಞಯಾಜನ, ಋಗ್ವೇದ ಕಾನ, ಜಯವ್ಯಾಸ ಗೀತೆ, ಋಗ್ವೇದ ಸೃಷ್ಟಿ ಋಕ್ಕುಗಳ ಮಹಾಭಾಷೆ ಮಮಯೋನಿರ್ ಮಹದಬ್ರಂಹ ಭೂವಲಯ ವಿದುರನ ಮಾರ್ಗ, ಗಾಂಗೇಯ ಗೀತೆ, ಕರುನಾಡಲಿ ಗೀರ್ವಾಣಿ ಪ್ರಾಕೃತ ಅಪಭ್ರಂಶದಂಕ ವಿಜ್ಞಾನಗೀತೆ ಮುಂತಾದುವನ್ನು ವಿವರಿಸಲಾಗಿದೆ.

## 25ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಓಂಕತ್ಸತ್, ಸಿವಸಿದ್ಧಿ ದಿವ್ಯಧ್ವನಿಲಕ್ಷಣ ಆದಿ ಅನಾದಿ, ಶ್ರೀನಿವಾಸಾಗಮ 718 ಭಾಷೆಯ ಜಿನವಾಣಿ ಬೊಮ್ಮನ ಕಾವ್ಯ ಅಣಮಹಾನ್ ರೂಪದ ಸಿಹಿ ಕರ್ಮಾಟಕಾವ್ಯ ವಿಜ್ಞಾನ ದೊಳಗೆ ದಿವ್ಯಧ್ವನಿ ಮೋಕ್ಷವನಿತೆಯಕೂಟದ ಕಾಮಕಲೆ ಮುಂತಾದುವನ್ನು ಪ್ರಸ್ತಾಪಿಸಲಾಗಿದೆ.

## 26ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಋಗ್ಮಂತ್ರ ಸೂತ್ರ, ಓಂತತ್ ಸಮಿತುರ್ ಮಂತ್ರ, ಜಿನ, ಶಿವ, ವಿಷ್ಣು, ಮುದ್ರೆ, ಭಾರತ, ರಾಮಾಯಣದಂಕ, ಋಗ್ಮಂತ್ರ ಸಾಂಗತ್ಯ, ರಾಜವಿದ್ಯಾರಾಜನ ಗುಹ್ಯಯೋಗ, ಮುಕ್ತಿಮಾರ್ಗ, ಗುರು ಬ್ರಹ್ಮ ಜ್ಞಾನ ಸ್ಥಾನ ಮುಂತಾದುವನ್ನು ಗೀತಾರ್ಥ ವಿವರಣೆಯಲ್ಲಿ ತಿಳಿಸಲಾಗಿದೆ.

## 27ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಬ್ರಹ್ಮಾಂಡತಾಣವೆಲ್ಲವ ನೊಂದೆ ಕ್ಷಣದಲ್ಲಿ ಅರಿವ ಕ್ರಮ ಜೀವರ ಹೊಟ್ಟೆಯೊಳಗಿರುವ ಪರಬ್ರಹ್ಮ ರುಷಿಮಂಡಲ ಶೋಽಯೋಽಹಿ ಜ್ಞಾನ ಅತಿಬುದ್ಧಿವಂತಿಕೆಯೆಂದರೆ ಆತ್ಮನನ್ನು ಸೃತ್ತಿಸುವುದು ಋಗ್ವೇದದಾದ್ಯಂತ ಧರ್ಮಾರ್ಥ ಕಾಮಮೋಕ್ಷ ಸಾಧನ ಮುಂತಾದವನ್ನು ವಿವರಿಸಲಾಗಿದೆ.

## 28ನೇ ಅಧ್ಯಾಯ

ಆ ಅಧ್ಯಾಯದಲ್ಲಿ ದ್ವಾದಶಂಗವೇದ, ಕೃಷ್ಣನ ಹಠಯೋಗ ತ್ರೈರೇಷ್ಠ ಸಾಘನ ಬ್ರಹಾಂಡ ಅತಿಶಯ ಶುದ್ಧ ರಹಸ್ಯ. ಅಧ್ಯಾತ್ಮ ವಶಗೈವ ಕಾವ್ಯ ಕುಟಿಲತೆ ಸಟೆ, ದಿಟಗಳ ವಿಚಾರ ಭಕ್ತಿಯ ನಿಷ್ಕಾಮದನು ಭವಯೋಗ ಹ್ರೀಂ,-ಶ್ರೀಂ, ಹ್ರೂಂ ಹೇಂಕಾರ ಭಕ್ತಿಯೋಗ ಮುಂತಾದವನ್ನು ವಿವರಿಸಿದೆ.

## 29ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಆಹಾರಮಾರ್ಗಣೆ ನಿಜಭಕ್ತಿಯ ಕ್ರಮ, ಸ್ವಮತಪರಮತ ಭೇದ, ಭಾವ, ವರ್ಜನೆ, ಆತ್ಮಾನು, ಸಂಧಾನವಿಲ್ಲದ ಯೋಗದ ನಿಷ್ಫಲತೆ, ತ್ರಿಕಾಲಾ ಬಾಧಿತ ಋಗ್ವೇದ ಆತ್ಮಾಗಮ, ಕುರುಕ್ಷೇತ್ರದ ಉಪಸರ್ಗ ಇಷ್ಟಾರ್ಥವೇದದ ಅನಂತ ಜ್ಞಾನ, ಸೃಷ್ಟಿ, ವಿಜ್ಞಾನ, ಅಹಂಕಾರ ವರ್ಜ್ಯನೆ, ಬುದ್ದಿ, ಸಿದ್ದಿಯ, ಆನಂದ ಭಾಗ, ತ್ರಯಾಸಕೋಟಿ ಸವಾರ್ಯದಂದವುತ, ಶೋಕವ ಕಳೆವ ಅಶೋಕ ಫಲ, ಓಬೇಯ ಕಾವ್ಯದ ಓಂ ಓಂ ಭೇದ ಪರಮಾತ್ಮನ ಬಳಿ ಸಾತ್ವ ವಿಜಯಾಂಕದವತಾರ ಮುಂತಾದವುನ್ನು ವಿವರಿಸಲಾಗಿದೆ.

## 30 ಅಧ್ಯಾಯ

ಈ ಅಧ್ಯಾಯದಲ್ಲಿ ವೇದ ಜ್ಞಾನಗೀತೆ, ಓಂ ಓಂದಂಕಾಕ್ಷರ ಸರಣಿ, ತ್ರೈ ವಿದ್ಯೆ ನೋಹಂಪಾನ, ಸಂಖ್ಯಾತ, ಅಸಂಖ್ಯಾತ, ಶುಭದ ಪ್ರಕರ್ಷ ಪ್ರಮಾಣ, ಅತೀಂದ್ರಯ ಸುಖ, ಜಿಹ್ವಾ ಬಂಧನ, ಕಾವ್ಯ ಕ್ರಮ, ಕರುನಾಡ ತಣ್ಣೆನೊಳು ಹುಟ್ಟಿದ ಹರಿಪುರುವಂಶ, ಕಾಮನಮಲಾಂಗದ ದಕ್ಷಿಣಗೀತೆ, ಸೂತ್ರಯಜ್ಞ ವಿದುರ ನೀತಿ, ಋಗ್ವೇದ ದರ್ಶನ, ಮುಂತಾದವನ್ನು ವರ್ಣಿಸಿದೆ.

## 31. ಅಧ್ಯಾಯ

ಈ ಅಧ್ಯಾಯ ವರ್ಣ ರಕ್ಷಣೆ ಬ್ರಾಹ್ಮಣ ಧರ್ಮ ಕಾರವನ ಬಲಾಬಲ, ಶ್ರೀ ಕೃಷ್ಣನ ಶಿಕ್ಷಣ ಯುಕ್ತಿ ಅಕ್ಷರ ಬ್ರಹ್ಮ ಯಮನಿಯಮ ದಮನ ಏಕಾಕ್ಷರದಲ್ಲಿ ಋಗ್ವೇದ

ಬಂಧನ, ಆತ್ಮ ಜ್ಞಾನ ಜ್ಯೋತಿ ಸುಖದ ಮಾರ್ಗದಲ್ಲಿ ಬರುವ ಶತ್ರುದಮನ ಸಮಸ್ತ ಶಬ್ದಾಗಮ, ಓಂಕದಕ್ಷರದಲ್ಲಿ ಅನಂತ ಶಕ್ತಿ ವದನರಂಗಸ್ಥಲ ಚೂಲಿಕೆ ಧರ್ಮ ವೃಷದಂಕ ಅಂಕ, ವಿಜ್ಞಾನ, ರೇಖಾಗಮ, ಋಕ್ ಬಿಂದುಗಣಿತ, ಗಾಯಿತ್ರಿ ರತ್ನಾಂಕ ವಿಜಯಧವಲ ಭೂವಲಯ ಮುಂತಾದವುನ್ನು ಹೇಳಿದೆ.

## 32ನೇ ಅಧ್ಯಾಯ

ಈ ಅಧ್ಯಾಯದಲ್ಲಿ ಓಬೆಯ ಕಾವ್ಯಗಣದರರು, ಸತ್ಯ ವ್ರತಿಗಳು, ಅಣುಪರಮಾಣು, ಅನಂತ ವಸ್ತು ಅಕ್ಷರ ಬ್ರಹ್ಮ, ಕರ್ಮವರ್ಣನೆಯ ಕರ್ಮಾಟ ಸ್ಮೃತಿ, ಶೃತಿಯಕ್ಕನ ವಿಭು, ಜಯಾಖ್ಯಾನ, ಋಷಿ ವೇದವ್ಯಾಸರ ಹೆಮ್ಮೆಯಗಣಿತ, ಅಣುಮಹಾವ್ರತವ್ಯಾಖ್ಯಾನ, ಗೀತಾಂಕ ವಿಜ್ಞಾನ ಅಧ್ಯಾತ್ಮನಯಸಾರ ಹರಿಹರ ಜಿನ ಚಕ್ರಬಂಧ, ಭೂವಲಯ 18 ದಿನದ ಕುರುಕ್ಷೇತ್ರ ಯುದ್ಧದ 18ಶ್ರೇಣಿಯ ಕಾವ್ಯದ ಗೀತೆ ಮುಂತಾದವನ್ನು ವಿವರಿಸಲಾಗಿದೆ.

## 33ನೇಯಅಧ್ಯಾಯ

ಈ ಅಧ್ಯಾಯದಲ್ಲಿ ಗುರುಮಂಡಲ ತತ್ವಾರ್ಥ ಗೀತೆ ಉಸಹಜಿನೇಂದ್ರರ ಹಸ್ತಾಂಗುಲಿಯ ದಶಧರ್ಮ ವ್ಯಾಸಂಕ ಜಯಾಖ್ಯಾತ ಉತ್ಪತ್ತಿ ರಸಾತಲ ದಣುವಕಾಣುವುದು ಐರಾವತ ವರ್ಣನೆ ಅಂತರಂಗ ಬಹಿರಂಗದಾಳ ಭವಿಷ್ಯ ತೀರ್ಥ ಜಯಶೀಲವಾಣಿ ಅಣುವ್ರತ ಸಾಧನ. ಆದಿ ಅನಾದಿ ಸನಾದಿ ಅನಂತಾನಂತ ಅನುಬಂಧ ಮುಂತಾದುವನ್ನು ವಿವರಿಸಲಾಗಿದೆ.- 392-38151 9.60.336

**ಸಿರಿ ಕುಮುದೇಂದು ಗುರುವೇ ನಮಃ**

---

ವಿ.ಸೂ.: ಮುಂದಿನ ಅಧ್ಯಾಯಗಳ ವಿವರಣೆ ದೊರೆತಿಲ್ಲ.

# 5. ಕನ್ನಡದ ಕಾಮಧೇನು - ಕಲ್ಪವೃಕ್ಷ ಸರ್ವ ಭಾಷಾಮಯಿ ಸಿರಿಭೂವಲಯ

## ಗ್ರಂಥಪರಿಚಯ

1. ಸರ್ವ ಭಾಷಾಮಯಿ ಸಿರಿ ಭೂವಲಯ ಗ್ರಂಥವು ಕರ್ಣಾಟಕ ಸಾಮ್ರಾಜ್ಯದ ಮೈಸೂರು ಕೋಲಾರ ಜಿಲ್ಲೆಯ, ಚಿಕ್ಕಬಳ್ಳಾಪುರದ ತಾಲ್ಲೂಕಿನ ಸುಪ್ರಸಿದ್ಧನಂದೀದುರ್ಗದ ಬಳಿಯಲ್ಲಿರುವ "ಯಲವಭೂ" (ಯಲವಳ್ಳಿ) ಯಲ್ಲಿದ್ದ ಶ್ರೀ ಕುಮುದೇಂದು ಜೈನ ಮುನಿಗಳಿಂದ 1,500 ಶಿಷ್ಯರುಗಳ ಮೂಲಕ ಬರೆಸಲ್ಪಟ್ಟ ಬಹು ಪುರಾತನ ಕನ್ನಡ ಸಾಹಿತ್ಯವಾಗಿದೆ.

2. ಶ್ರೀ ಕುಮುದೇಂದು ಮುನಿಗಳು ಗಂಗರಸ ಸೈಗೊಟ್ಟ ಶಿವಮಾರನಿಗೂ, ಮಾನ್ಯಖೇಟದ ದೊರೆ ಅಮೋಘವರ್ಷನಿಗೂ ಈ ಕಾವ್ಯವನ್ನು ಹೇಳಿದರೆಂದು ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಮೈಸೂರು ಜಿಲ್ಲೆಯ ಪಿರಿಯಾ ಪಟ್ಟಣದ ದೇವಪ್ಪನೆಂಬ ಕವಿಯು ಈ ಕುಮುದೇಂದು ಆಚಾರ್ಯರ ಅಪ್ರತಿಮ ಜ್ಞಾನವನ್ನು "ಕುಮುದೇಂದು ಶತಕ" ವೆಂಬ ಗ್ರಂಥದಲ್ಲಿ ಬಹು ಸೊಗಸಾಗಿ ವರ್ಣಿಸಿದ್ದಾನೆ.

3. ಈ ಕಾವ್ಯವು ಹಿಂದಿನ ಮತ್ತು ಇಂದಿನ ಯಾವುದೇ ಲಿಪಿಯಲ್ಲಿಯೂ ಬರೆಯಲ್ಪಟ್ಟಿಲ್ಲ. ಕೇವಲ ಕನ್ನಡ ಅಂಕಿಗಳಲ್ಲಿ ಬರೆಯಲ್ಪಟ್ಟಿದೆ. ಈ ಚಕ್ರಗಳಲ್ಲಿ 1 ರಿಂದ 64 ರವರೆಗೆ ಸಂಖ್ಯೆಗಳು ಉಪಯೋಗಿಸಲ್ಪಟ್ಟಿವೆ. ಪ್ರತಿಯೊಂದು ಚಕ್ರದಲ್ಲಿಯೂ 27x27=729 ಮನೆಗಳೂ, ಸಂಖ್ಯೆಗಳೂ ಇವೆ. ಇಂಥ ಚಕ್ರಬಂಧಗಳು 16,000 ಇವೆಯೆಂದು ಹೇಳಲಾಗಿದೆ.

4. ಶ್ರೀ ಕುಮುದೇಂದು ಮುನಿಗಳಿಂದ ಬರೆಸಲ್ಪಟ್ಟ ಮೂಲಪ್ರತಿ ಸಿಕ್ಕಿಲ್ಲ. ಆ ಮಹಾಗ್ರಂಥವನ್ನು ಸೇನನೆಂಬ ದಂಡನಾಯಕನ ಧರ್ಮಪತ್ನಿ ಮಲ್ಲಿಕಬ್ಬೆ ಎಂಬಾಕೆಯು ಪುನಃ ಪ್ರತಿ ಮಾಡಿಸಿ ಮಾಘನಂದ್ಯಾ ಚಾರ್ಯರಿಗೆ ಶಾಸ್ತ್ರದಾನ ಮಾಡಿದಳೆಂದು ತಿಳಿಯಬರ್ ತದೆ. ಆ ಪ್ರತಿಯೇ ಈಗ ಸರ್ವಾರ್ಥ ಸಿದ್ಧಿ ಸಂಘದಲ್ಲಿರುವುದೆಂದು ತಿಳಿಯಲಾಗಿದೆ.

5. ಸುಪ್ರಸಿದ್ಧ ಜೈನ ಕ್ಷೇತ್ರವಾದ ಮೂಡಬಿದ್ರೆಯಲ್ಲಿರುವ ಧವಲಾದಿ ಸಿದ್ಧಾಂತ ತ್ರಯಗಳು ಹೇಗೆ ಮಹಾ ಪ್ರಯತ್ನದಿಂದ ಪ್ರಕಟವಾದುವೋ, ಹಾಗೆ, ಈ ಗ್ರಂಥದ

ಚಕ್ರಬಂಧಗಳ ರಹಸ್ಯವನ್ನು ಆಯುರ್ವೇದ ವಿದ್ವಾಂಸರಾದ ಪಂ॥ ಎಲ್ಲಪ್ಪ ಶಾಸ್ತ್ರಿಗಳು ಹಲವು ಮುನಿಗಳೊಡನೆಯೂ, ವಿದ್ವಾಂಸರೊಡನೆಯೂ, ಶಾಸ್ತ್ರಸಿದ್ಧಾಂತಗಳ ಮೂಲಕವೂ ತಪಸ್ಸಿನಷ್ಟು ಕಷ್ಟಪಟ್ಟು, ಭರತ ಖಂಡವನ್ನೆಲ್ಲಾ ತಿರುಗಿ, ಅರಿತು, ಸಾಧಿಸಿ, ಸಂಶೋಧಿಸಿ, ನಮ್ಮ ನಾಡಿಗೆ ಇದನ್ನು ಒದಗಿಸಿಕೊಟ್ಟಿದ್ದಾರೆ.

6. ಮೇಲೆ ಹೇಳಿದ 1 ರಿಂದ 64 ವರೆಗಿನ ಸಂಖ್ಯೆಗಳೂ ಅಕಾರದಿಂದ ಃಃ (ಅಫ್) ವರೆಗಿನ 64 ಅಕ್ಷರ-ಧ್ವನಿಗಳಾಗಿವೆ. ಅವುಗಳಲ್ಲಿ 27 ಸ್ವರಗಳೂ, 33 ವ್ಯಂಜನಗಳೂ, 4 ಅಯೋಗವಾಹಗಳೂ ಇವೆ. ಅವುಗಳ ಪಟ್ಟಿಯನ್ನು ಮುಂದೆ ಕೊಡಲಾಗಿದೆ. ಹೀಗೆ ಇದೊಂದು ಅಂಕಾಕ್ಷರ ವಿಜ್ಞಾನವಾಗಿದೆ.

7. ಪ್ರಪಂಚದ ಆದಿಯಲ್ಲೇ ಎಂದರೆ ಅನಾದಿ ಕಾಲದಿಂದ ಮನುಷ್ಯ, ಪಶು, ಮೃಗ, ಪಕ್ಷಿ, ಸೂರ್ಯ, ಚಂದ್ರ, ನಕ್ಷತ್ರ, ಗಿಡ, ಮರ, ಬಳ್ಳಿ, ಮುಂತಾದುವುಗಳು ಒಂದು ಗಣಿತದ ಆಧಾರ ಮತ್ತು ತತ್ವದ ಮೂಲಕ ಸೃಷ್ಟಿಯಾಗಿ ಬೆಳೆಯುತ್ತಿರುವಂತೆ ಪ್ರಪಂಚದಲ್ಲಿರುವ ಸಕಲ ದೇವ ಮಾನವರೂ, ಪಶು ಪಕ್ಷಿ ಕ್ರಿಮಿ ಕೀಟಾದಿಗಳೂ ಆಡುವ ಭಾಷೆ, ಉಚ್ಚರಿಸುವ ಸಕಲ ಶಬ್ಧಗಳೂ ಭಗವಂತನಿಂದ ಒಂದು ವಿಧವಾದ ಗಣಿತ ಸಿದ್ಧಾಂತದ ಮೂಲಕ, ದಿವ್ಯಧ್ವನಿಯಾಗಿ ಮೊದಲೇ ಸೃಷ್ಟಿಯಾಗಿದೆಯೆಂದೂ, ಅದೇ ಇಡೀ ಪ್ರಪಂಚಕ್ಕೆಲ್ಲಾ ಆದಿ ಭಗವದ್ಗೀತೆಯಾಗಿ (ಪುರುಗೀತೆ) ಸಕಲ ಭಾಷೆಗಳನ್ನೂ, ಸಮಸ್ತ ಧರ್ಮಗಳನ್ನೂ, ಒಳಗೊಂಡು ಬೆಳೆದು ಬರುತ್ತಿದೆಯೆಂದೂ, ಅದನ್ನೇ ಶ್ರೀ ಕುಮುದೇಂದು ಹಿಂದೆಯೇ ಇಂದಿನ, ಆಧುನಿಕ, ನವನಾಗರಿಕ ಪ್ರಪಂಚಕ್ಕೆ ಒಂದು ಪ್ರತ್ಯಕ್ಷ ವಿಶ್ವರೂಪದರ್ಶನ ಮಾಡಿಸಿದ್ದಾರೆಂಬುದನ್ನು ಈ ಗ್ರಂಥದಲ್ಲಿ ತಿಳಿಯಬಹುದಾಗಿದೆ.

8. ಇದನ್ನು ಸಿರಿ ಭೂವಲಯದಲ್ಲಿ, ಆದಿ ವೃಷಭ ತೀರ್ಥಂಕರರು ತಮ್ಮ ಪುತ್ರಿಯರಾದ ಬ್ರಾಹ್ಮೀ ಮತ್ತು ಸೌಂದರಿದೇವಿಯವರಿಗೆ ಅಂಕಾಕ್ಷರ ಜ್ಞಾನದಾನದ ಮೂಲಕ ಉಪದೇಶಿಸಿದರೆಂದೂ, ಅದನ್ನು ಅವರು ತಮ್ಮ ಸಹೋದರರಾದ ಭರತ ಗೊಮ್ಮಟರಿಗೆ ಹೇಳಿದರೆಂದೂ, ಅದನ್ನೇ ಅವರ ನಂತರ ಬಂದ ಸಕಲ ತೀರ್ಥಂಕರರೂ ಅವರಿಂದ ಕೇಳಿದ ಸಕಲ ಆಚಾರ್ಯರೂ ಮತ್ತು ಕುಮುದೇಂದುವೂ ಪ್ರಪಂಚಕ್ಕೆ ಉಪದೇಶ ಮಾಡಿಕೊಂಡು ಬಂದರೆಂದು ಹೇಳಲಾಗಿದೆ.

9. ಮೇಲೆ ಹೇಳಿದಂತೆ ಈ ಗ್ರಂಥದ ಚಕ್ರಗಳಲ್ಲಿರುವ ಅಂಕಿಗಳಿಗೆ ಅಕ್ಷರಗಳನ್ನು ಅಥವಾ ಧ್ವನಿಗಳನ್ನು ಮಾಡಿಕೊಂಡು ಅವನ್ನು ಇನ್ನೊಂದು ಪುಟದಲ್ಲಿ ತೋರಿಸಿರುವಂತೆ ಮೂಲೆಗಳಲ್ಲಿ ಬರುವ "ಶ್ರೇಣಿ" ಬಂಧದ ಮೂಲಕ ಓದಿದರೆ "ಅಷ್ಟ ಮಹಾಪ್‌ರಾತಿ ಹಾರ್‌ಯ......" ಎಂಬುದಾಗಿ ಆರಂಭವಾಗಿ ಈ ಗ್ರಂಥದ ಮೊತ್ತಮೊದಲನೆಯ 7 ಸಾಂಗತ್ಯ ಪದ್ಯಗಳು ಒಂದು ಚಕ್ರದಿಂದ ಬರುವುವು. ಇವು ಈಗಿನ ನಮ್ಮ ಒತ್ತಕ್ಷರ

ಪದ್ಧತಿಯಲಿಲ. ಸಂಸ್ಕೃತ, ಇಂಗ್ಲೀಷ್ ಮುಂತಾದ ಲಿಪಿಗಳಲ್ಲಿ ಬರುವಂತೆ ಉಚ್ಛಾರಣೆಯ ರೀತಿಯನ್ನು ಅನುಸರಿಸಿ, ಒಂದು ವಿಧವಾದ ಸ್ವಾಭಾವಿಕ ಶಬ್ಧ ಕ್ರಮದಲ್ಲಿ ಬರೆಯಲ್ಪಟ್ಟಿದೆ.

10. ಇದೇ ರೀತಿ ಉಳಿದ 1,270 - ಚಕ್ರಗಳನ್ನೂ ನಾನಾ ಬಂಧಗಳಲ್ಲಿ ಓದಿದರೆ 59 ಅಧ್ಯಾಯಗಳ 64,800 ಶ್ಲೋಕಗಳ ಮಂಗಳ ಪ್ರಾಭೃತ (ಮುನ್ನುಡಿ) ಎಂಬ ಮೊದಲನೆಯ ಖಂಡದ ಸಾಹಿತ್ಯವೂ ಸೃಷ್ಟಿಯಾಗುವುದು. ಅನಂತರ ಈ ಮೊದಲನೆಯ ಖಂಡದ 1,270 ಚಕ್ರಗಳಿಂದ 14,730 ಚಕ್ರಗಳೂ ಈ ಮೊದಲನೆಯ ಖಂಡದ ಸಾಹಿತ್ಯದಿಂದ ಇನ್ನೂ 5,35,200 ಶ್ಲೋಕಗಳುಳ್ಳ 8 ಖಂಡಗಳಷ್ಟು ಸಾಹಿತ್ಯವೂ ಒಂದರಿಂದಿನ್ನೊಂದರಂತೆ ಸೃಷ್ಟಿಯಾಗುವುವು. ಹಗೆ ಈ ಗ್ರಂಥವು 6,00,000 ಕನ್ನಡ ಶ್ಲೋಕಗಳುಳ್ಳದಾಗಿ ಪ್ರಪಂಚದಲ್ಲೇ ಅತ್ಯಂತ ದೊಡ್ಡ ಗ್ರಂಥವಾಗುವುದು. ಮೇಲ್ಕಂಡ 1,270 ಚಕ್ರಗಳಿಗೆ ಒಟ್ಟು ಧ್ವನಿಗಳು 9,25,830 ಆಗುವುವು. ಇನ್ನೂ 490 ಲಕ್ಷಶಬ್ದದಷ್ಟು ಸಾಹಿತ್ಯ ಸೃಷ್ಟಿಯಾಗಬೇಕಾಗಿದೆ.

ಈಗ ಮೇಲೆ ಹೇಳಿದ ಮಂಗಳ ಪ್ರಾಭೃತದ (1ನೆಯ ಖಂಡ) 33 ಅಧ್ಯಾಯಗಳು ಮಾತ್ರ ಇಲ್ಲಿ ಪ್ರಕಟವಾಗಿವೆ. ಇನ್ನೂ ಈ ಖಂಡದಲ್ಲಿ 26 ಅಧ್ಯಾಯಗಳೂ ಉಳಿದ 8 ಖಂಡಗಳಷ್ಟು ಮಹಾ ಸಾಹಿತ್ಯವೂ ಪ್ರಕಟವಾಗಬೇಕಾಗಿದೆ.

11. ಅನಂತರ ಹೀಗೆ ಬರುವ ಕನ್ನಡ ಶ್ಲೋಕಗಳ ಪ್ರತಿಯೊಂದು ಪದ್ಯದ ಮೊದಲನೆಯ ಅಕ್ಷರವನ್ನೂ ಒಂದು ಕ್ರಮವಾಗಿ ಸೇರಿಸಿಕೊಂಡು ಓದಿದರೆ 'ಅಟ್ಟ ಮಹ ಕಮ್ಮವಿಯಲಾ .....” ಎಂಬುದಾಗಿ ಪ್ರಾಕೃತ ಭಾಷೆಯ ಭಗವದ್ಗೀತಾ ಸಾಹಿತ್ಯವು ಸೃಷ್ಟಿಯಾಗುವುದು.

12. ಆ ಮೇಲೆ, ಹೀಗೆಯೇ, ಪ್ರತಿಯೊಂದು ಪದ್ಯದ 217ನೆಯ ಸ್ಥಾನದ ಅಕ್ಷರಗಳನ್ನು ಸೇರಿಸಿಕೊಂಡು ಓದಿದರೆ “ಓಕಾರಮ್‌ಬಿಂದು ಸಮ್‌ಯುಕ್‌ತಂ .....”

ಹೀಗೆಯೇ 11 ಅಧ್ಯಾಗಳಲ್ಲಿಯೂ ಕನ್ನಡ ಸಾಂಗತ್ಯ ಪದ್ಯಗಳಲ್ಲಿ ಪ್ರಾಕೃತ, ಸಂಸ್ಕೃತ ಸಾಹಿತ್ಯಗಳನ್ನು ಒಳಗೊಂಡಿರುವುದು ಕಂಡು ಬರುವುದು.

13. ಇದರಲ್ಲಿ ಇಡೀ ಗ್ರಂಥದ ತುಂಬಾ ಪೂರ್ಣ ಪದ್ಯಗಳ ಮಧ್ಯೆ, ಅಲ್ಲಲ್ಲಿ ಪಾದ ಪದ್ಯಗಳು ಬರುವುವು. ಉದಾ: 1ನೆಯ ಅಧ್ಯಾಯ 12 ರಿಂದ 18ರವರೆಗಿನ ಪದ್ಯಗಳು. ಇವು ಅವುಗಳ ಮೇಲಿರುವ 10ನೆಯ ಪದ್ಯದ ಪ್ರಾಸಕ್ಕೇ ಸೇರಿದ, ಕಡೆಯ, ವಿಶೇಷ ಪಾದಪದ್ಯಗಳು ಎಂದು ಭಾವಿಸಬೇಕು.

14. ಮುಂದೆ 12ನೆಯ ಅಧ್ಯಾಯ 26ನೆಯ ಪದ್ಯದಿಂದ ಪ್ರತಿಯೊಂದು ಅಧ್ಯಾಯದಲ್ಲಿಯೂ “....” ಚಿಹ್ನೆಗಳ ಮಧ್ಯೆ “ರಿದ್‌ಧಿ ಸಿದ್‌ಧಿಗೆ ಆದಿನಾಥರು ಅಜಿತರ ಸಿದ್‌ದುಗೆ ಎತ್‌ತು ಆನೆಗಳು ಮುದ್‌ದಿನಿಂ ಸ್‌ಯಾದ್‌ವಾದ.....” ಎಂಬುದಾಗಿ 'ಅಶ್ವಗತಿ'ಯಲ್ಲಿ ಬೇರೆ ಬೇರೆ ಸಾಹಿತ್ಯಗಳು ಪ್ರವಾಹ ರೂಪವಾಗಿ ಬರುವುವು.

15. ಅನಂತರ 19ನೆಯ ಅಧ್ಯಾಯದಲ್ಲಿ ಮೊದಲು ಹೇಳಿದ ಪ್ರಾಕೃತ ಸಂಸ್ಕೃತ, ಅಶ್ವಗತಿಯ ಅಂತರ ಸಾಹಿತ್ಯದೊಂದಿಗೆ ಪ್ರತಿಯೊಂದು ಪದ್ಯದಲ್ಲಿಯೂ 4 ಕಡೆಗಳಲ್ಲಿ ಒಟ್ಟು 10 ಅಕ್ಷರಗಳ ಪಕ್ಕದಲ್ಲಿ ಚುಕ್ಕೆಗಳನ್ನು ಹಾಕಿದೆ. ಅವುಗಳನ್ನು ಅದರ ಹಿಂದಿನ ಪುಟದಲ್ಲಿ ತೋರಿಸಿರುವಂತೆ ಮೇಲಿನಿಂದ ಕೆಳಕ್ಕೆ ಆ ಅಧ್ಯಾಯದ ಕಡೆಯ ಪದ್ಯದವರೆಗೂ ಒಂದೊಂದಕ್ಷರವನ್ನೇ ಸೇರಿಸಿ ಓದಿಕೊಂಡು ಅನಂತರ ಅದರ ಪಕ್ಕದ ಅಕ್ಷರದಿಂದ ಮೇಲಕ್ಕೆ ಮೊದಲನೆಯ ಪದ್ಯದವರೆಗೂ, ಪುನಃ ಮುಂದಿನ ಚುಕ್ಕಿಯ ಅಕ್ಷರದಿಂದ ಕೆಳಕ್ಕೂ, ಕಡೆಯ ಪದ್ಯದಲ್ಲಿ ಪುನಃ ಮೇಲಕ್ಕೂ 'ನಾಗ ಬಂಧ'ದಲ್ಲಿ ಓದುತ್ತಾ ಹೋದರೆ ಬೇರೊಂದು ಸಂಸ್ಕೃತ ಸಾಹಿತ್ಯವು ಹುಟ್ಟುವುದು. ಉದಾ: ಉ ಊ ಎಂಬಂತೆ

17. ಮೇಲಿನಿಂತೆಯೇ, 20ನೆಯ ಅಧ್ಯಾಯದಿಂದ ಗ್ರಂಥದ ಕಡೆಯವರೆಗೂ ಮೊದಲು ಹೇಳಿದ ಪ್ರಾಕೃತ, ಸಂಸ್ಕೃತ, ಅಶ್ವಗತಿ ಸಾಹಿತ್ಯದ ಜೊತೆಗೆ 18 ಪ್ರತ್ಯೇಕ ಸಾಲುಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯವು 'ಜೋಡಿ ನಾಗರ'ಟ ಬಂಧದಲ್ಲಿ ಹೊಸದಾಗಿ ಸೃಷ್ಟಿಯಾಗುವುದು.

ಉದಾ:

1ನೆಯ ಅಕ್ಷರ:- ಐಘಣಘಾ ಈ ಮಹಣಾ ತಿಹುವಣ.............॥ ಪ್ರಾಕೃತ

2ನೆಯ ಅಕ್ಷರ: ದೀಪ್‌ತಿತೇಜವನಾತ್ ಮಚಕ್‌ರದೊಳ್ (ಕೆಳಕ್ಕೆ ಪುನಃ ಜೋಡಿಸಿದಲಹಳು ಅಧ್ಯಾಯಗಳವರೆಗೂ ॥ ಕನ್ನಡ

3,5,9, 11, 14, 15 ಮತ್ತು ಕಡೆಯ ಅಕ್ಷರಗಳು (ಕೆಳಕ್ಕೆ)
(ಒಂದೇ ಅಧ್ಯಾಯ) ॥ ಸಂಸ್ಕೃತ.

4, 6, 10, 12, 18, 22ನೆಯ ಅಕ್ಷರಗಳು ಅಧ್ಯಾಯದ ಕಡೆಯಿಂದ ಮೇಲಕ್ಕೆ ಕನ್ನಡ

18. ಇದೇ ರೀತಿ ಈಗ ಮುದ್ರಣವಾಗಿರುವ ಮಂಗಳ ಪ್ರಾಭೃತದ 33 ಅಧ್ಯಾಯಗಳಲ್ಲೂ ಮುಂದೆ ಪ್ರಕಟವಾಗುವ 26 ಅಧ್ಯಾಯಗಳಲ್ಲೂ -

ಹೀಗೆ ಬರುವ ಏಕಾಕ್ಷರ ಪ್ರವಾಹ ಸಾಹಿತ್ಯವನ್ನೇ ಕ್ರಮವಾಗಿ ಸಾಲು ಪದ್ಯಳಾಗಿ ಬರೆದುಕೊಂಡು ಪುನಃ ಪುನಃ ಹುಡುಕಿ ಓದುತ್ತಾ ಹೋದರೆ ಅಕ್ಷರಕ್ಕೆ ಲಕ್ಷದಂತೆ ಎಂದೆಂದಿಗೂ ಮುಗಿಯದಷ್ಟು ಅಂತರ ಸಾಹಿತ್ಯ ಪ್ರವಾಹವು ಸಾಗರದಷ್ಟು ಸೃಷ್ಟಿಯಾಗುವುದು.

19. ಮುಂದೆ 82ನೆಯ ಪುಟದಲ್ಲಿ 7 ಭಾಷೆಗಳು ಬರುವುದು. 2ನೆಯ ಖಂಡದ ಒಂದು ಅಧ್ಯಾಯವನ್ನು ಉದಾಹರಣೆಗೆ ಕೊಡಲಾಗಿದೆ. ಅದರಲ್ಲಿ ಎಂದಿನಂತೆ ಲಲಿತವಾಗಿ ಬರುವ ಕನ್ನಡ ಸಾಂಗತ್ಯ ಪದ್ಯಗಳಲ್ಲಿ-

1ನೆಯ ಅಕ್ಷರ- ಕೆಳಕ್ಕೆ ಪ್ರಾಕೃತ: ಸುದಾಣಾಣಸ್‌ಸಅವರಣೀಯಂ .... ॥

9ನೆಯ ಅಕ್ಷರ - ಕೆಳಕ್ಕೆ ಗೀರ್ವಾಣೀಃ - ದಿವ್‌ಯಗೀಹಿ ದಿವ್‌ಯಾ ಅಮಾನುಷೀ.... ||

27ನೆಯ ಅಕ್ಷರ ಕೆಳಕ್ಕೆ ತೆಲುಗು: - ಸಕಲ ಭೂವಲಯ ಮುನುಕು.... ||

54ನೆಯ ಕಡೆಯ ಅಕ್ಷರ ಕೆಳಕ್ಕೆ ತಮಿಳು:- ಅಘರಮುದಲ್ ಎಳತ್ ತಲ್‌ಲಾಂ.

ಅನಂತರ ಪದ ಪದ್ಯಗಳಲ್ಲಿ-

1ನೆಯ ಅಕ್ಷರ ಕೆಳಕ್ಕೆ - ಅಪಭ್ರಂಶಃ ವನ್‌ದಿತ್‌ತು ಸವ್‌ವ ಸಿದ್‌ಧೇ ದುವ ...

' ' ಮಧ್ಯೆ ಇರುವ ಅಂತರ ಸಾಹಿತ್ಯ ಶೌರಸೇನಿ: ಣಮೋಅರಹಂತಾಣಂ ...||

82ನೆಯ ಪದ್ಯದಿಂದ "  " ರ ಮಧ್ಯೆ ಬರುವ ಅಂತರ್ ಸಾಹಿತ್ಯದಿಂದ

ಅರ್ಧಮಾಗದಿ:- ಬಾರಹಅನ್ ಗಾನ್‌ಗೀಜಾ..... (ಧರಳ ಸಿದ್ಧಾಂತ)

ಹೀಗೆ, ಸಿರಿಭೂವಲಯವು ಸಂಪೂರ್ಣವಾಗುವುದೊರಳಗೆ, ಪ್ರಪಂಚದ ಸಕಲ ಭಾಷೆಗಳಲ್ಲೂ ಲಕ್ಷಾಂತರ, ಕೋಟ್ಯಾಂತರ ಶ್ಲೋಕ ಸಾಹಿತ್ಯವು ಲಲಿತ ಕನ್ನಡ ಸಾಂಗತ್ಯ ಪದ್ಯಗಳಲ್ಲಿ ಸೃಷ್ಟಿಯಾಗಿ ಇಡೀ ಪ್ರಪಂಚವನ್ನೇ ತುಂಬುವಷ್ಟಾಗುವುದು.

20. ಈ ಗ್ರಂಥದಿಂದ ಅಂತರಾಂತರವಾಗಿ ಹುಟ್ಟುವ ಶ್ಲೋಕಗಳಿಂದ ಬರುವ ಶ್ರೀ ಮದ್ಭಗವದ್ಗೀತಾ, ಜಯಭಗವದ್ಗೀತಾ, ಋಷಿ ಮಂಡಲ, ಮೋಕ್ಷ ಸೂತ್ರ, ಮುಂತಾದವುಗಳ ಸಾಹಿತ್ಯವನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

21. ಹೀಗೆ ಕನ್ನಡದಲ್ಲಿ ಅಂಕಾಕ್ಷರ ವಿಜ್ಞಾನದಲ್ಲಿ ಪ್ರಪಂಚದಲ್ಲಿರುವ ಸಕಲ ಭಾಷೆಗಳನ್ನೂ ಸಕಲ ಮತ-ಧರ್ಮ-ಶಾಸ್ತ್ರಗಳನ್ನೂ, ವೈದ್ಯ, ಶಿಲ್ಪ, ವಿಜ್ಞಾನಾದಿ ಸಕಲ ಕಲೆಗಳನ್ನೂ ಕಟ್ಟಿಡುವ ಒಂದು ಮಹಾ ಶಕ್ತಿಯಿದೆಯೆಂಬುದನ್ನು ಶ್ರೀ ಕುಮುದೇಂದು ಆಚಾರ್ಯರು ಪ್ರತ್ಯಕ್ಷವಾಗಿ ಪ್ರಪಂಚಕ್ಕೆ ತೋರಿಸಿ ಕೊಟ್ಟಿದ್ದಾರೆ. ಮತ್ತು ಪ್ರಪಂಚದಲ್ಲಿರುವ ಸಕಲ ಭಾಷೆಗಳೂ ಕರ್ಮಾಟಕ ಮತ್ತು ಕರ್ನಾಟಕವೆಂದೂ ಈ ಸುಂದರ ಕರ್ನಾಟಕ ಭಾಷೆಯಲ್ಲಿ ಸಕಲ ಭಾಷೆಗಳೂ ತಾನೇ ತಾನಾಗಿ ಸುಲಲಿತವಾಗಿ ಹರಿದು ಬರುವುವೆಂದೂ, ಅವನ್ನು ಯಾವ ಕೃತಕ ಮಾರ್ಗವೂ ಇಲ್ಲದೆ ಗಣಿತ ಸಿದ್ಧಾಂತದಲ್ಲಿ, ಸರಮಗ್ಗಿ ಕೋಷ್ಟಕದಂತೆ ಸಹಜ ರೂಪದಲ್ಲಿ ಕಟ್ಟಲಾಗಿದೆಯೆಂದೂ ಈ ಗ್ರಂಥದಲ್ಲಿ ಹಲವು ಸಲ ಹೇಳಲಾಗಿದೆ.

22. ಮತ್ತು ಈ ಗಣಿತ ಸಿದ್ಧಾಂತದ ಮೂಲಕ 1 ರಿಂದ 64 ಧ್ವನಿಗಳಲ್ಲಿ ಒಂದು ವಿಶಿಷ್ಟ ರೀತಿಯ ನಾನಾ ಸಂಯೋಗ ಭಂಗಗಳ ಮೂಲಕ (Permutation & Combination) ಪ್ರಪಂಚದ ಸಕಲ ಶಬ್ದಾಗಮವೂ 92 ಬಿಡಿಯಂಕಗಳಲ್ಲಿ (Digits) ಮುಕ್ತಾಯವಾಗುವುದೆಂದೂ ಆದರಲ್ಲಿ ಹಿಂದಿನ, ಇಂದಿನ ಮತ್ತು ಮುಂದಿನ ಎಲ್ಲಾ ಶಬ್ದಗಳೂ ತಾನಾಗಿಯೇ ಆಗಲೇ ಹುಟ್ಟಿವೆಯೆಂದು ತೋರಿಸಲಾಗಿದೆ. ಉದಾ:- ಗಜ

ಎಂಬ ಎರಡಕ್ಷರದಿಂದ ಜಗ ಎಂಬ ಇನ್ನೊಂದು ಶಬ್ದವೂ, ದವನ ಎಂಬ 3 ಅಕ್ಷರದ ಒಂದು ಸಾಮಾನ್ಯ ಶಬ್ದದಿಂದ ವನದ, ನವದ, ದನವ, ವದನ, ಎಂಬ 6 ಶಬ್ದಗಳೂ ಉಂಟಾಗುವಂತೆ 64 ಅಕ್ಷರಗಳ ಸಂಯೋಗ ಭಂಗಗಳಿಂದ 92 ಬಿಡಿಯಂಕಗಳಷ್ಟು ಸಕಲ ಶಬ್ದಾಗಮವೂ ಹುಟ್ಟುವುವು.

ಈ ಗಣಿತವೂ ಈ ಸಾಹಿತ್ಯದಷ್ಟೇ ಎಂದರೆ ಸಾಗರೋಪಮದಷ್ಟೇ ಆಗುವುದು. ಏಂಕೆಂದರೆ ಅಂಕವೆಷ್ಟೋ ಅಕ್ಷರವೂ ಅಷ್ಟೇ ಎಂಬ ಮಾತು ಸ್ವತಃ ಸಿದ್ಧವಾಗುವುದು. ಇದರಿಂದ ಎಲ್ಲ ಶಬ್ದಗಳೂ ಮೊದಲೇ ಹುಟ್ಟಿವೆಯೆಂಬುದು ವ್ಯಕ್ತವಾಗುವುದು ಮತ್ತು ಈ 64 ಧ್ವನಿಗಳನ್ನೆಲ್ಲಾ ಯಾವುದೋ ಒಂದು ಬಂಧದ ಮೂಲಕ ಕಟ್ಟಲ್ಪಟ್ಟಿರುವುದುರಿಂದ ಸಕಲ ಸಾಹಿತ್ಯವೂ ಸಹಜರೂಪದಲ್ಲಿ ಮೊದಲೇ ಸೃಷ್ಟಿಯಾಗಿರುವುದು ಕಂಡುಬರುವುದು. ಅಂಥ ಗಣಿತ ಬಂಧ ಯಾವುದೆಂಬುದನ್ನು ವಿದ್ವಾಂಸರುಗಳು ಕಂಡು ಹಿಡಿಯಬೇಕಾಗಿದೆ.

(ಈ ಗ್ರಂಥದಲ್ಲಿ ಹೇಳಿರುವ ಗಣಿತ ವಿವರಣೆಯನ್ನು ಇನ್ನೊಂದು ಪುಸ್ತಕದಲ್ಲಿ ಕೊಡಲಾಗುವುದು).

23. ಆದ್ದರಿಂದ ಇದರಂತೆ ಕೇವಲ 1 ರಿಂದ 9 ಮತ್ತು '0' ಯಿಂದ ಬರೆಯಲ್ಪಡುವ 92 ಸಂಖ್ಯೆಗಳಲ್ಲಿ ಧ್ವನಿಗಳಲ್ಲಿ ಅಥವಾ ಅಕ್ಷರಗಳಲ್ಲಿ ಪ್ರಪಂಚದ ಎಲ್ಲಾ ಭಾಷೆಗಳ ಎಲ್ಲಾ ವಿಧವಾದ ಧ್ವನಿಗಳನ್ನೂ ಕಟ್ಟಬಹುದು ಮತ್ತು ಯಾರು ಬೇಕಾದರೂ ಯಾವ ಭಾಷೆಯ ಶಬ್ದಗಳನ್ನು ಬೇಕಾದರೂ ಲೇಶವೂ ತಪ್ಪಿಲ್ಲದೆ ಸ್ಪಷ್ಟವಾಗಿ, ನಿರ್ದಿಷ್ಟವಾಗಿ ಓದಿ ಬರೆಯಬಹುದು. ಇದರಿಂದ ಇಂದು ಬೃಹದಾಕಾರವಾಗಿ ಬೆಳೆಯುತ್ತಿರುವ ಬಹು ಬಾಷಾಲಿಪಿ ಸಮಸ್ಯೆಯ, ದೇವಾನುಗ್ರಹದಿಂದ ಪ್ರಪಂಚದಲ್ಲೆಲ್ಲಾ ಒಂದೇ ರೀತಿಯಲ್ಲಿರುವ ಕೇವಲ 1 ರಿಂದ 9 ರವರೆಗಿನ ಅಂಕಿ-ಸಂಖ್ಯೆ ಗಣಿತದಿಂದ ಸುಲಭವಾಗಿ ಪರಿಹಾರವಾಗುವುದು. ಮತ್ತು ಇಡೀ ಪ್ರಪಂಚಕ್ಕೆಲ್ಲಾ ಬಹು ಸುಲಭವಾಗಿ ಏಕ ಲಿಪಿ ಪ್ರಸಾರಮಾಡಬಹುದು. ಮುದ್ರಮಾದಿ ಸಕಲ ಕಾರ್ಯಗಳೂ ಬಹು ಸುಲಭವಾಗುವುದು.

24. ಈ ಗ್ರಂಥದ ವಿಶೇಷ ಮುನ್ನುಡಿಯಲ್ಲಿನ ಪುಟದಲ್ಲಿ ಸಕಲ ಕಾವ್ಯ ಸೃಷ್ಟಿಗೂ ಆದಿಯಾದ ಸೊನ್ನೆಯಿಂದ ಹೇಗೆ ಕನ್ನಡ ಅಂಕಿಗಳು ಉತ್ಪತ್ತಿಯಾಗಿವೆಯೆಂಬುದನ್ನು ನೋಡಬಹುದು. ಸ್ವಲ್ಪ ಹೆಚ್ಚು ಕಡಿಮೆ ಇದೇ ರೀತಿ ಇಂಗ್ಲೀಷ್ ಸಂಸ್ಕೃತ ಮುಂತಾದ ಅಂಕಿಗಳೂ ಇರುವುದೂ ಒಂದು ಆಶ್ಚರ್ಯಕವಾಗಿದೆ.

25. ಹೀಗೆ ಈ ಗ್ರಂಥವು ಸಾವಿರಾರು ವರ್ಷಗಳಹಿಂದೆಯೇ ಪ್ರಪಂಚದ 718 ಭಾಷೆಗಳನ್ನು, 363 ಮತಗಳನ್ನು, 64 ಕಲೆ (ವಿದ್ಯೆ)ಗಳನ್ನು ಒಳಗೊಂಡ ಏಕಮಾತ್ರ ವಿಶ್ವಸಾಹಿತ್ಯವಾಗಿದೆ.

26. ಇದನ್ನು ನಮ್ಮ ಸನ್ಮಾನ್ಯ ರಾಷ್ಟ್ರಾಧ್ಯಕ್ಷರಾದ ಡಾ|| ರಾಜೇಂದ್ರ ಪ್ರಸಾದರೇ ಆದಿಯಾಗಿ ನಮ್ಮ ರಾಷ್ಟ್ರದ ಮತ್ತು ಪ್ರಪಂಚದ ಎಲ್ಲ ವಿದ್ವಾಂಸರುಗಳೂ ನೋಡಿ, ಪರಿಶೀಲಿಸಿ, ಮೆಚ್ಚಿ ಪ್ರಶಂಸಿಸಿದ್ದಾರೆ.

27. ಈಗ ಈ ಗ್ರಂಥದ ಮಂಗಳ ಪ್ರಾಭೃತದ 1,270 ಚಕ್ರಗಳನ್ನು ರಾಷ್ಟ್ರಾಧ್ಯಕ್ಷರವರ ಮತ್ತು ಭಾರತ ಸರಕಾರದ ಕೃಪೆಯಿಂದ ಪ್ರಪಂಚದ ಉಪಯೋಗಕ್ಕಾಗಿ ಮೈಕ್ರೋಫಿಲಂ ಮೂಲಕ ಹಿಂದೀ ಮತ್ತು ಇಂಗ್ಲೀಷಿನಲ್ಲಿ ಮುದ್ರಮಕ್ಕೆ ತಯಾರುಮಾಡಿ ಕೊಡಲಾಗುತ್ತಿದೆ.

28. ಮತ್ತು ದೆಹಲಿಯಲ್ಲಿರುವ ಸ್ವಸ್ತಿ ಶ್ರೀ 108 ಆಚಾರ್ಯ ದೇಶಭೂಷಣಮುನಿ ಮಹಾರಾಜರವರೂ ಪಂ|| ಎಲ್ಲಪ್ಪ ಶಾಸ್ತ್ರಿಗಳವರೂ ಈ ಗ್ರಂಥವನ್ನು ಹಿಂದೀ ಯಲ್ಲಿ ಟೀಕು ಸಮೇತ ಬರೆಯುತ್ತಿರುವುದಲ್ಲದೇ, ಸರ್ವಾರ್ಥ ಸಿದ್ಧಿ ಸಂಘದವರು ಅಲ್ಲಿನ ಜೈನಮಿತ್ರ ಮಂಡಲಿಯವರ ಮೂಲಕ ಪ್ರಕಟಣೆ ಮಾಡಿಸುತ್ತಿರುವುದು ನಮ್ಮ ಕರ್ಣಾಟಕದ ಮತ್ತು ಭಾರತದ ಮಹಾ ಸೌಭಾಗ್ಯವಾಗಿದೆ.

29. ಇನ್ನು ಈ ಗ್ರಂಥದ ಪ್ರಾಕೃಥನ, ಕವಿಯ ವಿಚಾರ, ಭಾಷೆ ಮತ್ತು ಲಿಪಿ, ಬಾಷೆಗಳ ಪಟ್ಟಿ, ಕಾವ್ಯ ಬಂಧಗಳು ಧಾರ್ಮಿಕದೃಷ್ಟಿ, ಕನ್ನಡದ ಕಥೆ, ಭೂವಲಯದ ಪ್ರತಿಯೊಂದೂ ಅಧ್ಯಾಯಗಳಲ್ಲಿಯೂ ಬರುವ ವಿಷಯಗಳು ಮುಂತಾದುವನ್ನು ಮುಂದೆ ಕೊಡಲಾಗಿದೆ.

30. ಈ ಗ್ರಂಥದ ಬಗ್ಗೆ ಬಂದಿರುವ ಅನೇಕ ಪ್ರಶಸ್ತಿ ಪತ್ರಗಳು ಕೆಲವನ್ನು ಕಡೆಯಲ್ಲಿ ಕೊಡಲಾಗಿದೆ.

ಇನ್ನೂ ಹೆಚ್ಚಿನ ವಿವರಗಳು ಬೇಕಾದರೆ ಸರ್ವಾರ್ಥ ಸಿದ್ಧಿ ಸಂಘಕ್ಕೆ ಬರೆದು ತಿಳಿದುಕೊಳ್ಳಬಹುದು.

ಸಿರಿಭೂವಲಯ ಪ್ರಚಾರಕ,
ಕೆ. ಅನಂತ ಸುಬ್ಬರಾಯ
ಪತ್ರಿಕೋದ್ಯೋಗಿ, ಕನ್ನಡ ಶೀಘ್ರಲಿಪಿ
ಮತ್ತು ಕನ್ನಡ ಟೈಪ್‌ರೈಟರ್‌ಕರ್ತ.

ಬೆಂಗಳೂರು
27-12-57



ಯು.ಬಿ. ದೇಬರ ಸಮ್ಮುಖದಲ್ಲಿ ಜೈನ ಮುನಿಗಳ ಭೇಟಿ



ಯು.ಬಿ. ದೇಬರರವರಿಂದ ಸಿರಿಭೂವಲಯ ಗ್ರಂಥದ
ಬಗ್ಗೆ ವಿಚಾರ ವಿಮರ್ಶೆ



ಸಿರಿಭೂವಲಯ ಪ್ರಚಾರ ಕಾರ್ಯಾಲಯದಲ್ಲಿ
ದಿವಂಗತ ಅನಂತ ಸುಬ್ಬರಾಯರು



108, ಆಚಾರ್ಯ ಶ್ರೀದೇಶಭೂಷಣ ಮಹಾರಾಜರವರ ಆಶೀರ್ವಾದಪೂರ್ವಕ
ಸಮಾರಂಭ ರಾಜ್ಯದ ಆಗಿನ ಮುಖ್ಯಮಂತ್ರಿಗಳಾದ
ಸರ್ವಶ್ರೀ ಎಸ್. ನಿಜಲಿಂಗಪ್ಪನವರ ಸಮ್ಮುಖದಲ್ಲಿ



ಶ್ರೀ ಕೆ. ಅನಂತಸುಬ್ಬರಾಯರು ಸಿರಿಭೂವಲಯ ಪ್ರಚಾರ ಕಾರ್ಯದಲ್ಲಿ



ತುಮಕೂರಿನಲ್ಲಿ ನಡೆದ ಸಿರಿಭೂವಲಯ ಪ್ರಚಾರ
ಸಭೆಯಲ್ಲಿ ಕೆ. ಅನಂತ ಸುಬ್ಬರಾಯರು



ಪಂ|| ಯಲ್ಲಪ್ಪ ಶಾಸ್ತ್ರಿಯವರ ಸಿರಿಭೂವಲಯ ಕಾರ್ಯಾಲಯ



ಕೆ. ಅನಂತ ಸುಬ್ಬರಾಯರು ಸಿರಿಭೂವಲಯದ ಪ್ರಚಾರ ಕಾರ್ಯದಲ್ಲಿ



ಕಾರ್ಯಾಲಯಕ್ಕೆ ಹಲವು ಪ್ರಮುಖರ ಭೇಟಿ



ಅನುಬಂಧ-1

# ದಿ॥ ಕೆ. ಅನಂತ ಸುಬ್ಬರಾಯರ ಜೀವನಕ್ಕೆ ಸಂಬಂಧಿಸಿದ ಪ್ರಮುಖ ಘಟನೆಗಳ ವಿವರ

| | | |
|---|---|---|
| 9-12-1907 | : | ಜನನ |
| 1911 | : | ಪಿತೃವಿಯೋಗ |
| 1921 | : | ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ |
| 1923 | : | ಇಂಗ್ಲೀಷ್‌ಲೋಯರ್‌ಸೆಕೆಂಡರಿಪರೀಕ್ಷೆಯಲ್ಲಿ ತೇರ್ಗಡೆ |
| 1925 | : | ಕನ್ನಡ ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆ |
| 1925 | : | ವಿವಾಹ |
| 1925 | : | ಉಪಾಧ್ಯಾಯರಾಗಿ ವೃತ್ತಿಜೀವನದ ಆರಂಭ. |
| 1925-1929 | : | ಕನ್ನಡ ಶೀಘ್ರಲಿಪಿ ಸಂಶೋದನೆಯ ಪ್ರಯೋಗಗಳು ಮತ್ತು ಕನ್ನಡ ಶೀಘ್ರ ಲಿಪಿ ಸಂಶೋಧನೆಯಲ್ಲಿ ಯಶಸ್ಸು ಪಡೆದದ್ದು. |
| 1923 | : | ಕನ್ನಡ ಶೀಘ್ರಲಿಪಿಯ ಅಂಗೀಕಾರಕ್ಕೆ ಸರ್ಕಾರದಲ್ಲಿ ಮನವಿ |
| 1931 | : | ಎನ್.ಎಸ್. ಸುಬ್ಬರಾಯರ ಮೂಲಕ ಸರ್ಕಾರದ ಅಂಗೀಕಾರಕ್ಕೆ ಪ್ರಯತ್ನಿಸಿದ್ದುದು. |
| 1931 | : | ಶಿವಮೊಗ್ಗದಿಂದ ಬೆಂಗಳೂರಿಗೆ ವರ್ಗವಾಗಿ ದೇವರಾಯರನ್ನು ಬೇಟಿಯಾದುದ್ದು. |
| 1932 | : | ಮೈಸೂರಿನಲ್ಲಿ ಶಾಸನ ಸಭೆಯ ಕಲಾಪಗಳ ವರದಿ ತಯಾರಿಸಿದ್ದು. |
| 1932 | : | ಸ್ವತಂತ್ರವಾಗಿಯೇ ಶೀಘ್ರಲಿಪಿ ಪುಸ್ತಕವನ್ನು ಬರೆದು ಕಲ್ಲಚ್ಚು ಮುದ್ರಣದಲ್ಲಿ ಪುಸ್ತಕ ಪ್ರಕಟಿಸಿದ್ದು. |
| 1932 | : | ಕನ್ನಡ ಬೆರಳಚ್ಚು ಯಂತ್ರದ ಸಂಶೋಧನೆಯ ಪ್ರಯೋಗ |
| 1932 | : | ಸ್ವತಂತ್ರವಾಗಿ ಕರಡು ಮಾದರಿಯಂತ್ರದ ತಯಾರಿಕೆ |

| | | |
|---|---|---|
| 1933 | : | ಭಿನ್ನಾಕ್ಷರಕ್ರಮ "ಇ" ಕಾರಕ್ರಮ ಪೂರ್ಣಾಕ್ಷರ ಕ್ರಮಗಳಲ್ಲಿ ಪ್ರಯೋಗ. |
| 1933 | : | ಪೂರ್ಣಾಕ್ಷರ ಕ್ರಮದಲ್ಲಿ ಮಾದರಿಯಂತ್ರ ತಯಾರಿಕೆ. |
| 8-12-1933 | : | ಕನ್ನಡ ಬೆರಳಚ್ಚುಯಂತ್ರ ತಯಾರಿಕೆಯ ಬಗ್ಗೆ ನೆರವು ಕೋರಿ ಕನ್ನಡ ಸಾಹಿತ್ಯ ಪರಿಷತ್ತಿಗೆ ಪತ್ರ. |
| 26-4-1934 | : | ಪ್ರಯತ್ನವನ್ನು ಪ್ರಶಂಶಿಸಿ ಪರಿಷತ್ತಿನಿಂದ ಮರುಪತ್ರ. |
| 30-12-1935 | : | ಉಪಾಧ್ಯಾಯ ವೃತ್ತಿಗೆ ರಾಜಿನಾಮೆ ನೀಡಿ ಪತ್ರಿಕೋದ್ಯಮದ ಪ್ರವೇಶ. |
| 1936 | : | ಮೈಸೂರಿನಲ್ಲಿ ಶಾರದಾ ಕನ್ನಡ ಶೀಘ್ರಲಿಪಿ ಪುಸ್ತಕದ ಪ್ರಕಟಣೆ. |
| 1936 | : | ಬಿ.ಎಮ್.ಶ್ರೀ ಅಧ್ಯಕ್ಷತೆಯಲ್ಲಿ ಅಕ್ಷರ ಸಂಸ್ಕರಣ ಸಮ್ಮೇಳನ. |
| 1939 | : | ಮೂರೇ ಕಾಸಿಗೆ ಮಕ್ಕಳ ಅಕ್ಷರ ಪುಸ್ತಕ ಪ್ರಕಟಣೆ |
| 1941 | : | ಶೀಘ್ರಲಿಪಿಯ ಸಂಕ್ಷಿಪ್ತ ಪುಸ್ತಕ ಪ್ರಕಟಣೆ. |
| 1949 | : | ಕನ್ನಡ ಬೆರಳಚ್ಚುಯಂತ್ರ ತಯಾರಿಕೆ ಬಗ್ಗೆ ರೆಮಿಂಗ್ಟನ್ ಪ್ರತಿನಿಧಿಯೊಂದಿಗೆ ಮಾತುಕತೆ. |
| 1949 | : | ಶ್ರೀ ಚೆಂಗಲರಾಯರೆಡ್ಡಿಯವರಲ್ಲಿ ಮನವಿ. |
| 1949 | : | ಶ್ರೀ ದಿವಾಕರ ರಂಗರಾಯರಿಗೆ ಪತ್ರ. |
| 22-12-1949 | : | ಶ್ರೀ ದಿವಾಕರ ರಂಗರಾಯರಿಂದ ಮರು ಪತ್ರ |
| 1949 | : | ಟೈಪ್‌ರೈಟರ್‌ಗಳಲ್ಲಿ ಇಂಗ್ಲೀಷ್ ಅಂಕಿಗಳೇ ಇರಬೇಕೆಂದು ರಾಜ್ಯ, ಕೇಂದ್ರ ಸರ್ಕಾರದ ಆದೇಶ. |
| 1940-1951 | : | ಇಂಗ್ಲೀಷ್ ಹಾಗೂ ಕನ್ನಡ ಎರಡೂ ಇರುವ ಕೀ ಬೋರ್ಡ್ ಬಗ್ಗೆ ಪ್ರಯೋಗ |
| 23-2- 1950 | : | ಶರ್ಮ ಸಮಿತಿ ರಚನೆ (E 9591-2-EDN-10-49-102, Bangalore, Dated : 23-2-1950) |
| 23-4-1950 | : | ಶರ್ಮ ಸಮಿತಿಯಿಂದ ಯಂತ್ರಗಳ ಪರಿಶೀಲನೆ |

| | | |
|---|---|---|
| 24-4-1950 | : | ಶರ್ಮ ಸಮಿತಿಯವರ ಲಿಪಿ ಬದಲಾವಣೆಯ ಟೈಪ್ ರೈಟರ್ ಬಗ್ಗೆ ಪ್ರಚಾರ. |
| 25-4-1950 | : | ಶರ್ಮ ಸಮಿತಿಯವರ ಲಿಪಿ ಬದಲಾವಣೆಯ ಟೈಪ್‌ರೈಟರ್ ವಿರುದ್ದ ಪ್ರತಿಭಟನೆ. |
| 21-6-1950 | : | ಲಿಪಿ ಸುಧಾರಣೆಗೆ ಶರ್ಮ ಸಮಿತಿಯ ಸರ್ಕಾರದ ಆಜ್ಞೆ ಪಡೆದ ವರದಿ |
| 1950 | : | ಸೇವಕ ಪತ್ರಿಕೆಯ ಪ್ರಕಟಣೆ |
| ಮಾರ್ಚ್/ 9-1950 | : | ಶರ್ಮ ಸಮಿತಿ ವರದಿ ಪ್ರಕಟಣೆ |
| ಜನವರಿ/ 1950 | : | ಶರ್ಮ ಸಮಿತಿ ಟೈಪ್‌ರೈಟರ್ ಬಗ್ಗೆ ಪ್ರಕಟಣೆ. |
| 30-3-1952 | : | ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರಿಗೆ ಮನವಿ. |
| 9-5-1952 | : | ಎ.ಜಿ. ಆರ್. ಸಮಿತಿಯ ನೇಮಕ. |
| ಮೇ/ 1952 | : | ಶರ್ಮ ಸಮಿತಿಯ ಸುಧಾರಿತ ಕ್ರಮದ ಟೈಪ್ ರೈಟರಿನ ಅಂಗೀಕಾರದ ಪ್ರಕಟಣೆ |
| ಮೇ/ 1953 | : | ಶರ್ಮ ಸಮಿತಿಯ ಸುಧಾರಿತ ಕ್ರಮದ ಟೈಪ್‌ರೈಟರ್ ವಿರುದ್ಧ ಪ್ರತಿಭಟನೆ. |
| 9-5-1952 | : | ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಎಂ.ಆ ರ್ ಶ್ರೀನಿವಾಸ ಮೂರ್ತಿಯವರ ಅಧ್ಯಕ್ಷತೆಯಲ್ಲಿ ವಿದ್ವದ್ಗೋಷ್ಠಿ (ಕ.ಸಾ.ಪ. ಸಂಖ್ಯೆ 3285-3298 ತಾ॥ 2-5-52) |
| 1955-1956 | : | ಸಿರಿಭೂವಲಯದ ಪ್ರಕಟಣೆಯಲ್ಲಿ ಶ್ರಮಿಸಿದ್ದು |
| 11-12-1956 | : | ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಟೈಪ್‌ರೈಟರ್ ಪ್ರದರ್ಶನ ಪರಿಷತ್ತಿಗೆ ಒಂದು ಸೆಟ್ ಕನ್ನಡ ಅಕ್ಷರಗಳ ನೀಡಿಕೆ. |
| ಮಾರ್ಚಿ/1957 | : | ಶ್ರೀನಿಜಲಿಂಗಪ್ಪನವರಿಗೆ ಮನವಿ |
| 25-3-1957 | : | ಶ್ರೀ ನಿಜಲಿಂಗಪ್ಪನವರಿಂದ ಯಂತ್ರಗಳ ಪರಿಶೀಲನೆ |
| 30-3-1957 | : | ಸರ್ಕಾರದಿಂದ ಯಂತ್ರ ಅಂಗೀಕಾರದ ಬಗ್ಗೆ ಪ್ರಕಟಣೆ |

| | | |
|---|---|---|
| 19-4-1952 | : | ಶ್ರೀ ನಿಜಲಿಂಗಪ್ಪನವರಿಗೆ ಕೀ ಬೋರ್ಡ್ ತಲುಪಿಸಿದ್ದು |
| 1958 | : | ಹಾಸನ ಪತ್ರಿಕೆ ಪ್ರಾರಂಭ |
| 20-2-1958 | : | ಕರಾರು ಪತ್ರ ಕಳಸಲು ಮುದ್ರಣಾಧಿಕಾರಿಗಳ ಪತ್ರ (S- 9238-57-58) |
| 25-2-1958 | : | ಸ್ಟಾಂಪ್ ಹಾಕಿದ ಕರಾರು ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿದ್ದು. |
| 4-8-1958 | : | ಖಾಲಿ ಕಾಗದದ ಮೇಲೆ ಕರಾರು ಪತ್ರ ಬರೆದು ಕಳುಹಿಸಲು ಸೂಚನೆ. |
| 4-9-1958 | : | ಶ್ರೀಮಾನ್ ಬಿ.ಡಿ. ಜತ್ತಿಯವರ ಪತ್ರಿಕೆ ಹೇಳಿಕೆ. |
| 5-9-1958 | : | ಜತ್ತಿಯವರ ಹೇಳಿಕೆ ವಿರುದ್ಧ ಪ್ರತಿಭಟನೆ. |
| ಸಂಪ್ಟೆಬರ್ 1958 | : | ವಿದ್ಯಾ ಇಲಾಖೆ ಕಾರ್ಯದರ್ಶಿ ಶ್ರೀ ಮಹಮದ್ ಅಹಮದ್ ಭೇಟಿ. |
| ಸೆಂಪ್ಟೆಬರ್ 1958 | : | ಮುಖ್ಯ ಕಾರ್ಯದರ್ಶಿ ಶ್ರೀ ಪಿ.ವಿ.ಆರ್ ರಾವ್ ಭೇಟಿ. |
| ಅಕ್ಟೋಬರ್ 1958 | : | ಬಿ.ಡಿ. ಜತ್ತಿಯವರ ಪತ್ರಿಕಾ ಹೇಳಿಕೆ, ನಂತರ ಸುಬ್ಬರಾಯರ ಯಂತ್ರ ಕ್ರಮದ ಅಂಗೀಕಾರ ಸ್ಪಷ್ಟನೆ. |
| 29-10-1958 | : | ಹೊಸ ಕರಾರು ಪತ್ರ ಸಿದ್ಧವಾದದು. |
| 17-11-1958 | : | 5,000 ರೂಪಾಯಿಗಳ ಗೌರವ ಸಂಭಾವನೆ ನೀಡಿದ್ದು. |
| 14-10-1959 | : | ಸರ್ಕಾರಿ ಮುದ್ರಾಣಾಲಯದಲ್ಲಿ ಹೊಸ ಮಾದರಿ ಯಂತ್ರದ ತಯಾರಿಕೆ. |
| ಜೂನ್ 1959 | : | ಪುನಃ ಯಂತ್ರಗಳ ಪರಿಶೀಲನೆಗೆ ಗುರುಬಸಪ್ಪ ಸಮಿತಿ ನೇಮಕ. |
| ಜೂನ್ 1959 | : | ಗುರುಬಸಪ್ಪ ಸಮಿತಿ ವಿರುದ್ಧ ಪ್ರತಿಭಟನೆ. |
| 30-7-1959 | : | ಅನಂತ ಸುಬ್ಬರಾಯರ ಯಂತ್ರ ಕ್ರಮದ ಬಗ್ಗೆ ಸುಳ್ಳು ವರದಿಯ ಅಪಪ್ರಚಾರ. |
| ನವೆಂಬರ್ 1959 | : | ಸರ್ಕಾರಿ ಮುದ್ರಣಾಲಯದಲ್ಲಿ ಮತ್ತೆ ಮಾದರಿ ಯಂತ್ರಗಳ ತಯಾರಿಕೆ. |

| | | |
|---|---|---|
| 20-11-1959 | : | ವಾರ್ತಾ ಇಲಾಖೆಯಿಂದ ಕನ್ನಡದಲ್ಲಿ ಮೊಟ್ಟ ಮೊದಲ ವಾರ್ತಾಪ್ರಕಟಣೆ. |
| 1960 | : | ಬೆಂಗಳೂರು, ಮೈಸೂರು, ತುಮಕೂರುಗಳಲ್ಲಿ ಸಂಕ್ಷಿಪ್ತ ಶಿಕ್ಷಣ ನೀಡಿದ್ದು. |
| 20-10-1960 | : | ವಿದೇಶಿ ಕಂಪನಿಗೆ ಯಂತ್ರ ತಯಾರಿಕೆಗೆ ಆರ್ಡರ್ ನೀಡಿದ್ದು. |
| 17-11-1660 | : | ಗುರುಬಸಪ್ಪ ಸಮಿತಿ ವರದಿ ಪ್ರಕಟಣೆ. |
| 19-6-1961 | : | ಸ್ವಿಡನ್ನಿನ ಹಾಲ್ಡ ಕಂಪನಿಯಲ್ಲಿ ಆರು ಮಾದರಿ ಯಂತ್ರಗಳು ತಯಾರಾಗಿ ಬಂದದ್ದು. |
| 3-7-1961 | : | ಅನಂತ ಕೀ ಬೋರ್ಡಿನ ಟೈಪ್‌ರೈಟರ್ ಬಗ್ಗೆ ಪ್ರಜಾವಾಣಿ ಪತ್ರಿಕೆಯಲ್ಲಿ ಮೊಟ್ಟ ಮೊದಲ ಸಚಿತ್ರ ವರದಿ. |
| ಜುಲೈ 1961 | : | ಬಿ.ಡಿ ಜತ್ತಿಯವರಿಂದ ನೂತನ ಯಂತ್ರ ವೀಕ್ಷಣೆ. |
| 15-11-1961 | : | 2000 ರೂಪಾಯಿಗಳ ಗೌರವ ಸಂಭಾವನೆ ನೀಡಿದ್ದು. |
| 1961 | : | ಬೆಳಗಾಂ, ಗುಲ್ಬರ್ಗ, ಬೆಂಗಳೂರಿನಲ್ಲಿ ಸಂಕ್ಷಿಪ್ತ ಶಿಕ್ಷಣ ನೀಡಿದ್ದು. |
| 1962 | : | ವಿದೇಶಿ ಯಂತ್ರ ತಯಾರಿಗೆ ಕಂಪನಿಯ ಪ್ರತನಿಧಿ ಶ್ರೀ ಆರ್ ಎಸ್ ಸೀಜರ್ ಅವರ ಭೇಟಿ |
| 1962 | : | ಕನ್ನಡ ಆಡಳಿತ ಭಾಷೆಯಾಗಿ ಮಸೂದೆ. |
| 1672-1963 | : | ಮಾನೋಟೈಪ್ ಯಂತ್ರ ತಯಾರಾಗಿ ಬಂದದ್ದು, |
| 7-9-1962 | : | ಅನಂತ ಸುಬ್ಬರಾಯರಿಗೆ ಸರ್ಕಾರವು ಕನ್ನಡ ಟೈಪ್‌ರೈಟರ್ ಕೊಟ್ಟದ್ದು. |
| 7-6-1963 | : | ಪಠ್ಯ ಪುಸ್ತಕ ಸಮಿತಿ ರಚನೆಗೆ ಮನವಿ. |
| 1963 | : | ಲೈನೋಟೈಪ್ ಯಂತ್ರ ತಯಾರಿಕೆಗೆ ಸಮತಿ ನೇಮಕ. |
| ಜನವರಿ 1968 | : | ವಾಣಿಜ್ಯ ವಿದ್ಯಾಸಂಸ್ಥೆಗಳ ಸಂಘದ ಆಶ್ರಯದಲ್ಲಿ ಪಠ್ಯಪಸ್ತಕ ಪ್ರಕಟಣೆ. |

| | | |
|---|---|---|
| 1964 | : | ಸರ್ಕಾರದಿಂದ ಪಠ್ಯ ಪುಸ್ತಕ ಸಮಿತಿ ನೇಮಕವಾದುದು. |
| 1964 | : | ಇಂಟರ್‌ಟೈಪ್ ಯಂತ್ರಗಳು ತಯಾರಾಗಿ ಬಂದ್ದದು. |
| 1967 | : | ಕನ್ನಡ ಬೆರಳಚ್ಚು ಯಂತ್ರಕ್ಕೆ ಸಂಬಂಧಿಸಿದ ಪರೀಕ್ಷೆಗಳು ಪ್ರಾರಂಭವಾದುದು. |
| 1970 | : | ಸರ್ಕಾರದಿಂದ ಪಠ್ಯ ಪುಸ್ತಕ ಪ್ರಕಟಣೆ. |
| 24-7-1970 | : | ಸರ್ಕಾರದಿಂದ ನೂರೈವತ್ತು ರೂಗಳ ಮಾಸಾಶನ ದೊರೆತದ್ದು. |
| 1970 | : | ಪ್ರಾಥಮಿಕ ಹಂತದಿಂದಲೇ ಮಕ್ಕಳಿಗೆ ಕನ್ನಡ ಕಲಿಸಬಾರದೆಂಬ ತತ್ವಕ್ಕೆ ಬದ್ಧವಾಗಿ ಕ.ಸಾ.ಪ ದಲ್ಲಿ ನಡೆದ ಪಠ್ಯಪುಸ್ತಕ ಕುರಿತ ವಿಚಾರಗೋಷ್ಠಿ. |
| 8-2-1975 | : | ಕರ್ನಾಟಕದಲ್ಲೇ ಟೈಪ್‌ರೈಟರ್ ತಯಾರಿಕಾ ಕಾರ್ಖಾನೆಯ ಸ್ಥಾಪನೆಗಾಗಿ ಸಮಿತಿ ನೇಮಕ. |
| 19-2-1975 | : | ಕನ್ನಡ ಬೆರಳಚ್ಚು ಗಾರರಿಗೆ ವಿಶೇಷ ಸಂಭಾವನೆಗೆ ಆದೇಶ. |
| 1-11-1976 | : | ಮಾಸಾಶನವನ್ನು 500 ರೂ ಗಳಿಗೆ ಹೆಚ್ಚಿಸಿದ್ದು. |
| 19-6-1978 | : | ಜೀವನ ಹಾಗೂ ಸಾಧನೆಯನ್ನು ಕುರಿತು ಅನಂತ ಪುಸ್ತಕ ಪ್ರಕಟಣೆ. |
| 14-11-1985 | : | ಅನಾರೋಗ್ಯದ ನಿಮಿತ್ತ ಖಾಸಗಿ ಚಿಕಿತ್ಸಾಲಯಕ್ಕೆ ಸೇರಿದ್ದು. |
| 23-11-1985 | : | ಶಸ್ತ್ರ ಚಿಕಿತ್ಸೆ. |
| 29-11-1985 | : | ನಿರ್ಗಮನ. |
| 30-11-1985 | : | ದೇಹಸಂಸ್ಕಾರ. |
| 9-11-1986 | : | ಸ್ಮಾರಕ ಗ್ರಂಥಮಾಲೆಯಾಗಿ ಅನಂತ ಪ್ರಕಾಶನದ ಪ್ರಾರಂಭೋತ್ಸವ. |

---

# ಅನುಬಂಧ-೨

## ಸನ್ಮಾನ ಸಮಾರಂಭಗಳು

| | | |
|---|---|---|
| 1. ಸಾಹಿತ್ಯ ಪರಿಷತ್ ಸಮ್ಮೇಳನಾಧ್ಯಕ್ಷರ ಸನ್ಮಾನ ಸಮಾರಂಭದಲ್ಲಿ | : | 13-12-1959 |
| 2. ಮಣಿಪಾಲ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ | : | 27-12-1960 |
| 3. ವಾಣಿಜ್ಯ ಶಾಲಾ ಸಂಘ ಸಮ್ಮೇಳನದಲ್ಲಿ | : | 23-02-1963 |
| 4. ಸಾರ್ವಜನಿಕ ಸೇವಾ ಪ್ರಶಸ್ತಿ | : | 22-10-1963 |
| 5. ಸಂಯುಕ್ತ ಕರ್ನಾಟಕ ಪತ್ರಿಕಾ ಕಾರ್ಯಾಲಯದಲ್ಲಿ | : | 14-05-1963 |
| 6. ಪ್ರಜಾವಾಣಿ ಪತ್ರಿಕಾ ಕಾರ್ಯಲಯದಲ್ಲಿ | : | 04-06-1963 |
| 7. ಅಖಿಲ ಭಾರತ ಶೀಘ್ರಲಿಪಿಕಾರರ ಸಮ್ಮೇಳನದಲ್ಲಿ | : | 29-06-1963 |
| 8. ಭಾರತೀ ವಾಣಿಜ್ಯ ಶಾಲೆಯವರಿಂದ | : | 04--2-194 |
| 9.ಶಿವಮೊಗ್ಗ ಜಿಲ್ಲೆ ಮತ್ತೂರು ಮಹಾಜನತೆಯಿಂದ | : | 08-04-1964 |
| 10. ಮೈಸೂರು ಮಹಿಳಾ ಸೇವಾಸದನದಿಂದ | : | 03-08-1965 |
| 11. ಮಡಿಕೇರಿ ಜಿಲ್ಲಾ ಜನತೆ | : | 23-08-1969 |
| 12. ವಾಲ್ಮೀಕಿ ಗಮಕ ಪಾಠಶಾಲಾ | : | 23-02-1969 |
| 13. ಮೈಸೂರು ಕನ್ನಡ ಸಂಘ ಸಂಸ್ಥೆಗಳು ರಾಜ್ಯೋತ್ಸವ | : | 13-11-1969 |
| 14. ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದಲ್ಲಿ | : | 26-12-70 |
| 15. ಪ್ರತಿಭಾ ಕಲಾ ಪರಿಷತ್ತಿನ ಆಶ್ರಯದಲ್ಲಿ | : | 10-12-1972 |
| 16. ಕನ್ನಡ ರಾಜ್ಯೋತ್ಸವ ಪ್ರಶಸ್ತಿ ನೀಡಿದಾಗ | : | 10-11-1972 |
| 17. ಬಿ.ಇ.ಎಲ್. ಕಾರ್ಮಿಕ ಸಂಘ ರಾಜ್ಯೋತ್ಸವದಲ್ಲಿ | : | 23-11-1973 |
| 18. ತಮಿಳು ಮನ್ರಮ್ | : | 02-12-1973 |
| 19. ಕನ್ನಡ ಸೇವಾದಳ ಮೈಸೂರು | : | 04-12-1973 |
| 20. ಲಯನ್ಸ್ ಕ್ಲಬ್ ಹಾಸನ | : | 11-10-1979 |
| 21. ಕರ್ನಾಟಕ ರಾಜ್ಯೋತ್ಸವ ಸಮಿತಿ ಬೆಂಗಳೂರು | : | 28-10-1976 |
| 22. ಸರಸ್ವತಿ ಸಭಾ ಹೊಸದುರ್ಗ | : | 25-11-1977 |

ಅಧಿಕೃತ ದಾಖಲೆಗಳಿರುವ ಸಭೆ ಸಮಾರಂಭಗಳನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ, ಇವಲ್ಲದೆ ಇನ್ನೂ ಅನೇಕ ಸಂಘ ಸಂಸ್ಥೆಗಳೂ ಅಭಿಮಾನಿಗಳೂ ಶ್ರೀ. ಕೆ ಅನಂತ ಸುಬ್ಬಾರಾಯರನ್ನು ಸನ್ಮಾನಿಸುವ ಮೂಲಕ ತಮ್ಮ ಗೌರವಾದರಗಳನ್ನು ಸೂಚಿಸಿದ್ದಾರೆ.

ಓದುಗರ ಜ್ಞಾನ ಸಂಪತ್ತನ್ನು ಹೆಚ್ಚಿಸುವ ಸಾಹಿತ್ಯ ಕೃತಿಗಳಿಗೆ ಮಿತಿ ಮೀರಿದ ಬೆಲೆ ಇಟ್ಟು ಮಾರಾಟ ಮಾಡುವುದನ್ನು ಕಂಡರೆ ಕೆ. ಅನಂತಸುಬ್ಬರಾಯರಿಗೆ ಮೊದಲಿನಿಂದಲೂ ಜಿಗುಪ್ಸೆ. ಆದರೆ ಧನಾರ್ಜನೆಯೇ ಜೀವನದ ಪರಮಗುರಿಯಾಗಿರುವ ಇಂದಿನ ಜನಜೀವನದಲ್ಲಿ ಸಾಹಿತ್ಯ ಕೃತಿಗಳ ಬೆಲೆಯು ಸ್ವರ್ಥಾತ್ಮಕವಾಗಿ ಏರುಮುಖವಾಗಿದ್ದು. ಇಳಿ ಮುಖವಾಗುವುದು ಕನಸಿನ ಮಾತಾಗಿದೆ. ಇದಕ್ಕೆ ಅನುಷಂಗಿಕವಾಗಿ ಹಲವಾರು ಕಾರಣಗಳಿರುತ್ತವೆ. ಬರಹಗಾರನಿಗೆ ಲಾಭವಾಗದಿದ್ದರೆ ಚಿಂತೆಯಿಲ್ಲ ಹಾನಿಯಾಗದಂಥ ಏನಾದರೊಂದು ವ್ಯವಸ್ಥೆಯನ್ನು ರೂಪಿಸಬೇಕಂದು ಸೂಚಿಸುತ್ತಿದ್ದರು.

## ಸಾರ್ಥಕ ಜೀವನ

ಸಿರಿಭೂವಲಯದ ಪ್ರಚಾರ ಕಾರ್ಯಕ್ಕಾಗಿ ತಮಗೆ ಎರಡು ತಿಂಗಳ ಕಾಲ ಹೆಚ್ಚಿನ ಆಯಸ್ಸು ಬೇಕೆಂದು ಇಚ್ಛಿಸಿದ ಅನಂತ ಸುಬ್ಬರಾಯರು ಸೂಚಿಸಿದಂತೆ ಸುದಾರ್ಥಿ.ಯವರು ಶಿವರಾಮ ಕಾರಂತರಿಗೆ ಪತ್ರ ಬರೆದು ಅಂಚೆಗೆ ಹಾಕಿದ್ದು ಸರಿಯಷ್ಟೆ. ಅದು ಸಕಾಲದಲ್ಲೇ ಮಂಗಳೂರಿಗೆ ತಲುಪಿತ್ತು. ಆದರೆ ಆ ವೇಳೆಗೆ ಕಾರಂತರು ತಮ್ಮ ಪರಮಪ್ರಿಯ ಪ್ರಾರ್ಥನಾ ಕ್ಷೇತ್ರವಾದ ಶ್ರೀ ಕೊಲ್ಲೂರು ಮೂಕಾಂಬಿಕೆಯ ದೇವಾಲಯಕ್ಕೆ ಪ್ರಯಾಣ ಬೆಳೆಸಿದ್ದರು. ಅಲ್ಲಿಗೆ ಹೋದರೆ ನಾಲ್ಕಾರು ದಿನಗಳ ಕಾಲ ಅಥವಾ ಹತ್ತು ಹದಿನೈದು ದಿನಗಳು ಅಲ್ಲಿ ತಂಗಿದ್ದು ಪ್ರಾರ್ಥನೆ ನಡೆಸುವುದು ಅವರ ಕ್ರಮ. ಈ ಸಲವೂ ಹೀಗೆ ಆಗಿತ್ತು. ಕಾರಂತರು ಮಂಗಳೂರಿಗೆ ಹಿಂತಿರುಗುವ ವೇಳೆಗೆ ಕೆ. ಅನಂತಸುಬ್ಬರಾಯರು ತಮ್ಮ ಜೀವಿತದ ಕೊನೆಯುಸಿರೆಳೆದ ದುಃಖದ ಸಂಗತಿಯನ್ನು ಹೊತ್ತ ಸುದಾರ್ಥಿಗಳವರ ಪತ್ರವೂ ಮಂಗಳೂರು ಸೇರಿತ್ತು. ಈ ಎರಡೂ ಪತ್ರಗಳನ್ನು ನೋಡಿದ ಕಾರಂತರ ಹೃದಯ ಕಲಕಿತ್ತು. ಎರಡು ಮೂರು ತಿಂಗಳ ಕಾಲ ಹೆಚ್ಚು ಆಯಸ್ಸನ್ನು ಅಪೇಕ್ಷಿಸಿದ ಅನಂತ ಸುಬ್ಬರಾಯರ ಅಂತರ್ಯದ ಆಶೆ ಸರ್ವಭಾಷಾಮಯಿ ಸಿರಿಭೂವಲಯ ಕುರಿತು ದಿ||ಅನಂತ ಸುಬ್ಬರಾಯರು ಸುದಾರ್ಥಿಗಳ ತುಂಬಿಸಿದ್ದ ಸಂಗತಿಗಳನ್ನು ಸೂಕ್ಷ್ಮವಾಗಿ ಶಿವರಾಮ ಕಾರಂತರಿಗೆ ವಿವರಿಸಿ ಈ ಮಹಾಗ್ರಂಥದ ಪ್ರಚಾರಕ್ಕೆ ವಿಶ್ವ ಕನ್ನಡ ಸಮ್ಮೇಳನದಿಂದ ಬೃಹತ್ ಜನಸ್ತೋಮವಿರುವ ವೇದಿಕೆಯೇ ಪ್ರಶಸ್ತವಾದುದೆಂದು ನಂಬಿದ್ದ ಸುಬ್ಬರಾಯರ ಆಸೆಯಾಗಿದ್ದಿತು. ಅದನ್ನು ಸಾಧಿಸುವುದ್ಕಕಾಗಿ ನಿಮ್ಮ ನೆರವು ಬೇಡಿದ್ದರು.

ಯಾವುದೇ ಪ್ರಯತ್ನ ನಡೆದರೂ ಅದು ಬಹುಪಯೋಗಿಯಾಗಿರಬೇಕೆಂಬುದು ರಾಯರ ತತ್ವ ಹಿಡಿದ ಕೆಲಸವನ್ನು ಪಟ್ಟು ಬಿಡದೆ ಮಾಡಿ ಮುಗಿಸುವ ಹಠದ ಗುಣ ಬಿಕನಾಸಿಯಾಗಲಿದ್ದ ಕನ್ನಡ ಲಿಪಿಯ ಉಳಿವಿಗೆ ಕಾರಣರಾಗಿ ನಿರಂತರವಾದ ಸೇವೆ ಸಲ್ಲಿಸಿದ ಸಾರ್ಥಕ ಜೀವಿ ಅಳಿದು ಹೋಗಲಿದ್ದ ಕನ್ನಡ ಲಿಪಿಯನ್ನು ಅದರ ಅನುಪಮ ಸೌಂದರ್ಯವನ್ನು ಉಳಿಸಿದ ಅನಂತ ಸುಬ್ಬರಾಯರ ಹೆಸರು ಕನ್ನಡ ಭಾಷೆಯು ಮುಂದೆ ಬದುಕಿರುವವರೆಗೂ ಚಿರಾಯು ಕನ್ನಡನಾಡು ನುಡಿಯ ಸೇವೆಗಾಗಿಯೇ ತಮ್ಮ ಆಯುಷ್ಯವನ್ನೆಲ್ಲಾ ಮುಡುಪಾಗಿಟ್ಟಿದ್ದರು.

ಸರ್ವಭಾಷಾಮಯಿ ಸಿರಿಭೂವಲಯ ಸಿದ್ಧಾಂತವನ್ನು ಮನನ ಮಾಡಿಕೊಂಡಿದ್ದ ಅನಂತ ಸುಬ್ಬರಾಯರಿಗೆ ಪ್ರಪಂಚದ ಎಲ್ಲಾ ಭಾಷೆಗಳಿಗೂ ಪರಿಪೂರ್ಣವಾದ ಮತ್ತು ಇಡೀ ಪ್ರಪಂಚಕ್ಕೆ ಗೊತ್ತಿರುವ ಕೇವಲ ಹತ್ತು ಅಂಕಿಗಳ ಮೂಲಕ ಅಂಕಾಕ್ಷರ ವಿಜ್ಞಾನವನ್ನು ಪ್ರಯೋಗಕ್ಕೆ ಒದಗಿಸಿಕೊಟ್ಟು ಅತಿಸುಲಭವಾಗಿ ಏಕಲಿಪಿಯ ವ್ಯವಹಾರವನ್ನು ತರಬೇಕೆಂಬ ಹಂಬಲ ಬಹಳವಾಗಿತ್ತು.

ಮುಂದೆ ಸರ್ವಭಾಷಾಮಯಿ ಸಿರಿಭೂವಲಯಕ್ಕೆ ಸೇವೆ ಸಲ್ಲಿಸಲು ಬೆಂಗಳೂರಿಗೆ ಬಂದಾಗ ಇವರು ತಮ್ಮ ಎಲ್ಲಾ ಪತ್ರಿಕಾ ವರದಿಗಾರನ ಸೇವೆಗೂ ರಾಜೀನಾಮೆ ಕೊಟ್ಟರು. ಅನಂತರ ಭೂವಲಯದ ಕೆಲಸ ಮುಗಿದ ಮೇಲೆ ಇನ್ನು ಮುಂದೆ ತಮ್ಮ ಸ್ವಕ್ಷೇತ್ರವಾದ ಹಾಸನದಲ್ಲಿ ನೆಲೆಸಲು ಬಂದರು. ಕೆಲ ಕಾಲಾನಂತರ ಅಲ್ಲಿ ಹಾಸನ ಪತ್ರಿಕೆಯ ಪ್ರಕಟಣೆ ಪ್ರಾರಂಭಿಸಿದರು.

ಸರ್ವಭಾಷಾಮಯಿ ಸಿರಿಭೂವಲಯದಲ್ಲಿ ಧರ್ಮದ ಬಗ್ಗೆ ಇರುವ ಉಲ್ಲೇಖಗಳನ್ನು ಅರಿತು ಅವುಗಳನ್ನು ಅನುಷ್ಠಾನಕ್ಕೆ ತರುವ ಪ್ರಯತ್ನ ನಡೆದರೆ ಇಡೀ ಪ್ರಪಂಚವೇ ಇಂದು ಅನುಭವಿಸುತ್ತಿರುವ ಧಾರ್ಮಿಕ ಗೊಂದಲದಿಂದ ಖಂಡಿತವಾಗಿಯೂ ಮುಕ್ತರಾಗಲು ಸಾಧ್ಯವೆಂಬುದು ಅನಂತಸುಬ್ಬರಾಯರ ನಂಬಿಕೆಯಾಗಿತ್ತು.

ಸಿರಿಭೂವಲಯವು ಅದ್ವಿತೀಯವಾದ ಸಾಹಿತ್ಯ ಕೃತಿ ಅದು ಕನ್ನಡ ಭಾಷೆಯಲ್ಲಿರುವುದು ಕನ್ನಡಿಗರೆಲ್ಲವೂ ನಿಜಕ್ಕೂ ಹೆಮ್ಮೆ ಪಡಬೇಕಾದ ಸಂಗತಿ. ಕನ್ನಡದಲ್ಲಿರುವ ಪ್ರಾಚೀನ ಅರ್ವಾಚೀನ ಕೃತಿ- ಕೃತಿಗಳೆಲ್ಲರ ವಿವರಗಳನ್ನೊದಗಿಸುವ ಹಲವಾರು ಕವಿ ಚರಿತ್ರೆಗಳನ್ನು ಅನೇಕರು ರಚಿಸಿದ್ದಾರೆ. ಆದರೆ ಅವರ ಪೈಕಿ ಯಾರೊಬ್ಬರೂ ಈ ಮಹಾಕೃತಿಯ ಬಗ್ಗೆ ಪ್ರಸ್ತಾಪಿಸಿದ ಅದಕ್ಕೆ ಯುಕ್ತವಾದ ಸ್ಥಾನವನ್ನು ನೀಡದಿರುವುದು ತುಂಬಾ ಅಪಮಾನದ ವಿಚಾರವಾಗಿದೆ. ಕನ್ನಡದಲ್ಲಿ ಇಂದ ಮಹತ್ತರವಾದ ಸಾಹಿತ್ಯಕೃತಿಯೊಂದು ಇದೆ ಎಂದು ಸೂಚಿಸುವುದೂ ಕೂಡ ಇಂದಿನ ಮಹಾ ಸಾಹಿತ್ಯೋತಿಹಾಸಕಾರರಿಗೆ ಸಹನವಾಗದ ವಿಚಾರವಾಗಿದೆ. ಇಂಥವರೆಲ್ಲರ ಸಾಮರ್ಥ್ಯ ಹಾಗೂ ವಿದ್ವತ್ತಿಗೆ ಸವಾಲಗಿ ಹಿಮಾಲಯದಂತೆ ಅಭ್ಯೇದ್ಯವಾಗಿರುವ ಸಿರಿಭೂವಲಯದ

ಔನತ್ಯವನ್ನು ಒಪ್ಪಿಕೊಳ್ಳುವುದೇ ನಮ್ಮ ವಿದ್ಯಾವಂತರ ವಿದ್ವಾಂಸರ ಆತ್ಮ ಗೌರವದ ಪ್ರಶ್ನೆಯಾಗಿರುವುದು ತೀರ ದುರದೃಷ್ಟದ ಸಂಗತಿಯಾಗಿದೆ.

ಇಂಥ ಮಹಾ ಗ್ರಂಥವನ್ನು ನಮ್ಮ ಕನ್ನಡಿಗರು ಇನ್ನೂ ಸರಿಯಾಗಿ ಕಣ್ಣು ಬಿಟ್ಟು ನೋಡುತ್ತಿಲ್ಲವಲ್ಲಾ. ಈ ಗ್ರಂಥವೊಂದಿದ್ದರೆ ಕನ್ನಡಿಗರು ಎಂದೆಂದಿಗೂ ಬಡತನ ಕಾಣಬೇಕಾಗಿಲ್ಲವಲ್ಲಾ ಎಂಬ ಕಳಕಳಿ ಅನಂತ ಸುಬ್ಬರಾಯರದು ಇಂಥಾ ಅದ್ಭುತ ಗ್ರಂಥವನ್ನು ಸಂಪೂರ್ಣವಾಗಿ ಅಧ್ಯಾಯನ ಮಾಡಲು ಶಕ್ತರಾದ ಕನ್ನಡಿಗರು ಕೆಲವರಾದರೂ ಈ ಕನ್ನಡ ನಾಡಿನಲ್ಲಿ ಸಿಕ್ಕಿದರೆ ಸಾಕು. ಕನ್ನಡವೂ ಕನ್ನಡಿಗರೂ, ಅಷ್ಟೇಕೆ? ಇಡೀ ಭಾರತ ಮತ್ತು ಪ್ರಪಂಚಕ್ಕೆ ಮಹೋಪಕಾರ ಮಾಡಬಹುದು ಎನ್ನುತ್ತಿದ್ದರು. ಅವರು ಅದಕ್ಕಾಗಿ ಅರ್ಹ ವ್ಯಕ್ತಿಗಳನ್ನು ಅರುಸತ್ತಿದ್ದರು. ಅವರಿಗೆ ತಿಳಿದಷ್ಟನ್ನೂ ಯಾರಿಗಾದರೂ ಹೇಳಿಕೊಟ್ಟು ಹೋಗಬೇಕೆಂದು ಹಗಲಿರುಳು ಹಂಬಲಿಸುತ್ತಿದ್ದರು. ದಿವಂಗತ ಪಂಡಿತ ಎಲ್ಲಪ್ಪ ಶಾಸ್ತ್ರಿಗಳು ಈ ಮಹಾಗ್ರಂಥದ ಬಹು ಭಾಗವನ್ನು ಕನ್ನಡದಲ್ಲಿ ಬರೆದಿಟ್ಟಿದ್ದಾರೆ. ದಿವಂಗತ ಕರ್ಲಮಂಗಲ ಶ್ರೀ ಕಂಠಯ್ಯನವರೂ ಈ ಗ್ರಂಥದೊಳಗಿನ ಅಪಾರ ಸಾಹಿತ್ಯವನ್ನು ಸಂಶೋಧಿಸಿ ಬರೆದಿಟ್ಟಿದ್ದಾರೆ.

ತಾಯಿ ಸಾವಿತ್ರಮ್ಮನವರೂ ಮೈಸೂರಿನಲ್ಲೇ ನಿಧನರಾಗಿದ್ದರಿಂದ ಮಕ್ಕಳ ಸಮೇತ ಬೆಂಗಳೂರಿಗೆ ಬಂದು ಗಾಂಧೀಬಜಾರಿನ ಒಂದು ಕೊಠಡಿಯಲ್ಲಿ ವಾಸಮಾಡಿ ತೊಡಗಿದರು. ಭೂವಲಯದ ಕೆಲಸಕ್ಕಾಗಿ ಅನಂತ ಸುಬ್ಬರಾಯರು ಬೆಂಗಳೂರಿಗೆ ಬಂದ ಕೂಡಲೇ ಶಾಸ್ತ್ರಿಗಳು ಅದಕ್ಕೆ ಅವಶ್ಯವಾಗಿದ್ದ ಮೈಕ್ರೋಫಿಲಂ ಮತ್ತು ಅದನ್ನು ಓದಲು ಮೈಕ್ರೋಫಿಲಂ ರೀಡರ್ ಯಂತ್ರ ಇಂಗ್ಲೀಷ್ ಮತ್ತು ಹೀಂದೀ ಟೈಪ್ ರೈಟರ್‌ಗಳನ್ನು ಕೊಂಡು ಕೊಂಡು ಕೆಲಸ ಆರಂಭಿಸಿದರು.

ದಿನಕ್ಕೆ ಎಂಟು ಹತ್ತು ಪುಟಗಳಂತೆ ಸಿರಿಭೂವಲಯದ ಚಕ್ರಗಳನ್ನು ಇಂಗ್ಲೀಷ್ ಮತ್ತು ಹಿಂದೀ ಅಂಕಿಗಳಲ್ಲಿ ಟೈಪ್ ಮಾಡಿ ಸಿದ್ದಪಡಿಸತೊಡಗಿದರು. ಭಾರತದ ಮಹಾ ವೇದ ವಿದ್ವಾಂಸರಾದ ಮಹರ್ಷಿ ದೈವರಾತ್ ಮತ್ತು ರಾಷ್ಟ್ರದ ನಾನಾ ಕಡೆಗಳಿಂದ ಮಹಾ ಮಹಾವಿದ್ವಾಂಸರು ವಿಶ್ವೇಶ್ವರ ಪುರದಲ್ಲಿದ್ದ ಸಿರಿಭೂವಲಯ ಕಾರ್ಯಾಲಕ್ಕೆ ಬಂದು ಅದನ್ನು ನೋಡುತ್ತಿದ್ದರು. ಒಂದು ವರ್ಷದೊಳಗೆ ಸಿರಿಭೂವಲಯದಲ್ಲಿ ಸರ್ಕಾರದವರು ಹೇಳಿದ್ದ 1,270 ಚಕ್ರಗಳನ್ನೂ ಟೈಪ್ ಮಾಡಿ ಒದಗಿಸಲಾಯಿತು.

ಈ ವೇಳೆಗೆ ಪಂಡಿತ ಎಲ್ಲಪ್ಪಶಾಸ್ತ್ರಿಗಳು ದೆಹಲಿಗೆ ಹೋಗಿ ಅಲ್ಲಿ ಆಚಾರ್ಯ ದೇಶ ಭೂಷಣ ಮಹಾಸ್ವಾಮಿಗಳವರೊಂದಿಗೆ ಭೂವಲಯಕ್ಕೆ ಹಿಂದೀ ವ್ಯಾಖ್ಯಾನವನ್ನು ಬರೆಸುತ್ತಿದ್ದರು. ದೌರ್ಭಾಗ್ಯ ವಶದಿಂದಾಗಿ ಶಾಸ್ತ್ರಿಗಳು ತ್ರೀವ್ರ ಅನಾರೋಗ್ಯದ ಕಾರಣ ಅನಿರೀಕ್ಷಿತವಾಗಿ ಸ್ವರ್ಗಸ್ಥರಾದರು. ಭೂವಲಯುದ ಕಾರ್ಯಕ್ರಮುಗಳೆಲ್ಲಾ

ಅಸ್ತವ್ಯಸ್ತವಾಗುವಂಥ ಸ್ಥಿತಿಗೆ ಬಂದಿತು. ಆದರೂ ಅನಂತ ಸುಬ್ಬರಾಯರು ಶ್ರೀ ಶಾಸ್ತ್ರೀಗಳ ಮಕ್ಕಳಾದ ಶ್ರೀ ಧರ್ಮ ಪಾಲ್ ಮತ್ತು ಶ್ರೀ ಶಾಂತಕುಮಾರ ಅವರಿಗೆ ಧೈರ್ಯ ಹೇಳಿಕೊಂಡು ತಮ್ಮ ಮಗ ಶ್ರೀ ಕೇಶವಮೂರ್ತಿಯವನ್ನು ಟೈಪ್ ಮಾಡಲು ಸೇರಿಸಿಕೊಂಡು ಭೂವಲಯವನ್ನು ಪೂರ್ತಿಯಾಗಿ ಟೈಪ್ ಮಾಡಿಸಿ ಭಾರತ ಸರಕಾರಕ್ಕೆ ಕಳುಹಿಸಿ ಕೊಡುವ ಏರ್ಪಾಟು ಮಾಡಿ ಹಾಸನಕ್ಕೆ ಹೊರಟುಹೋದರು. ಕಾಲಕ್ರಮದಲ್ಲಿ ಭೂವಲಯದ ಸಂಶೋಧಕರಲ್ಲಿ ಇನ್ನೊಬ್ಬರಾಗಿ ಉಳಿದಿದ್ದ ಮಹಾವಿದ್ವಾಂಸರಾದ ಶ್ರೀ ಕರ್ಲಮಂಗಲಂ ಶ್ರೀಕಂಠಯ್ಯನವರೂ ಸ್ವರ್ಗಸ್ಥರಾದರು.

ಭೂವಲಯಕ್ಕೆ ಸಂಬಂಧಿಸಿದಂತೆ ಎಲ್ಲವನ್ನು ತಿಳಿದಿದ್ದ ಇಬ್ಬರು ಮಹಾ ವಿದ್ವಾಂಸರನ್ನೂ ಕಳೆದುಕೊಂಡನಂತರ ಭೂವಲಯದ ಮುಂದಿನ ಸಂಶೋಧನಾ ಕಾರ್ಯಗಳು ಅದನ್ನು ಮುಂದುವರಿಸುವವರಿಲ್ಲದೆ ಸ್ಥಗಿತವಾಯಿತು. ಆದರೂ ಆಗ ಲಭ್ಯವಾಗಿರುವ ಮುದ್ರಣವಾಗಿರುಷ್ಟು ಕನ್ನಡ ಗ್ರಂಥವನ್ನಾದರೂ ನಮ್ಮ ಕನ್ನಡ ಜನತೆಯು ಸರಿಯಾಗಿ ಉಪಯೋಗಿಸಿಕೊಳ್ಳಲೆಂದು ಶ್ರೀ ಆನಂತಸುಬ್ಬರಾಯರು ಹೋಗಿ ಬಂದ ಕಡೆಗಳೆಲ್ಲೆಲ್ಲಾ ಅದರ ಪ್ರಚಾರ ಮಾಡುತ್ತಿದ್ದರು.

ಸರ್ವಬಾಷಾಮಯಿ ಸಿರಿಭೂವಲಯವು ಅಂಕಾಕ್ಷರ ವಿಜ್ಞಾನದಲ್ಲಿ ಬರೆಯಲ್ಪಟ್ಟಿದೆ. ಅದರಲ್ಲಿ 12,000 ಚಕ್ರಗಳಿವೆ 9 ಖಂಡಗಳಿವೆ. ಆರು ಲಕ್ಷ ಕನ್ನಡ ಶ್ಲೋಕಗಳಿವೆ. ಮತ್ತು ಇದೊಂದೇ ಗ್ರಂಥದಲ್ಲಿ ಪ್ರಾಕೃತ ಸಂಸ್ಕೃತ ಅರ್ಧಮಾಗಧೀ, ಅಪಭ್ರಂಶ ಮುಂತಾಗಿ ಇದುವರೆಗೆ ಹತ್ತಾರ ಭಾಷೆಗಳ ಸಾಹಿತ್ಯವನ್ನು ಮೇಲ್ಕಂಡ ವಿದ್ವಾಂಸರು ಗುರುತಿಸಿದ್ದಾರೆ ಈ ಗ್ರಂಥದ ಬಗ್ಗೆ ಮೈಸೂರು ವಿಶ್ವವಿದ್ಯಾನಿಲಯದ ಮಹಾ ವಿದ್ವಾಂಸರಾದ ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳೂ ಅಮೂಲಾಗ್ರವಾಗಿ ನೋಡಿ ಈ ಗ್ರಂಥದಿಂದ ಇಡೀ ಜಗತ್ತಿಗೆ ಮಹಾಪ್ರಯೋಜನವಿದೆ ಎಂದಿದ್ದಾರೆ.

ಇಡೀ ಭೂವಲಯದಲ್ಲಿ ಪ್ರಪಂಚದಲ್ಲಿರುವ ಬಹು ಮುಖ್ಯವಾದ 718 ಭಾಷೆಗಳ ಸಾಹಿತ್ಯವೂ ಎಂದೆಂದೂ ಇರತಕ್ಕ ಅವಿನಾಶಿಯಾದ 363 ಮತಧರ್ಮ ವಿವೇಚನೆಯೂ ಇದೆಯೆಂದೂ ಹೇಳಲಾಗಿದೆ. ಇದರಲ್ಲಿ ಪಾಶ್ಚಿಮಾತ್ಯ ಭಾಷೆಗಳೂ, ತುರುಕಿ ಪಾರಿಸಿ, ಮುಂತಾದ ಭಾಷೆಗಳೂ ಇರುವುದಾಗಿ ಹೇಳಲ್ಪಟ್ಟಿದೆ ಮತ್ತು ಈ ಗ್ರಂಥದಲ್ಲಿ ಪಶುಪಾಲನೆಯಿಂದ ಮೊದಲುಗೊಂಡು ಆಕಾಶ ಗಮನ ಅಣುವಿಜ್ಞಾನ ಆಯುರ್ವೇದ ಮುಂತಾದ ಎಲ್ಲಾ 64 ಮಹಾ ವಿದ್ಯೆಗಳೂ ಇವೆಯೆಂದು ಹೇಳಲಾಗಿದೆ.

ಇಡೀ ಪ್ರಪಂಚಕ್ಕೆಲ್ಲಾ ಒಂದೇ ಭಾಷೆ ಅದೇ ಕರ್ನಾಟಕ ಶಬ್ದ ಸಾಗರ ಎಲ್ಲಾ ಭಾಷೆಗಳಿಗೂ ಒಂದೇ ವ್ಯಾಕರಣ ಮನಜರಿಗೆಲ್ಲಾ ಒಂದೇ ಧರ್ಮ ಎಂದು ಮುಂತಾಗಿ ಸಿದ್ಧಾಂತರೂಪದಲ್ಲಿ ತೋರಿಸಿಕೊಡುವ ಗ್ರಂಥ ಇದೊಂದೇ ಈಗ ಪ್ರಕಟವಾಗಿರುವ

ಮುನ್ನುಡಿಯುಮೂರನೆಯ ಎರಡು ಭಾಗದಿಂದಲೇ ಅಪಾರ ಜ್ಞಾನಸಂಪತ್ತು ಲಭಿಸುವುದೆಂದು ಭಾವಿಸಲ್ಪಟ್ಟಿದೆ.

ಸಿರಿಭೂವಲಯುವು ಅದ್ವಿತೀಯುವಾದ ಸಾಹಿತ್ಯ ಕೃತಿ ಅದು ಕನ್ನಡ ಭಾಷೆಯಲ್ಲಿರುವುದು ಕನ್ನಡಿಗೆಲ್ಲರೂ ನಿಜಕ್ಕೆ ಹೆಮ್ಮೆ ಪಡಬೇಕಾದ ಸಂಗತಿ ಕನ್ನಡದಲ್ಲಿರುವ ಪ್ರಾಚೀನ ಅರ್ವಾಚೀನ ಕೃತಿ-ಕೃತಿಕರ್ತೃಗಳೆಲ್ಲರ ವಿವರಗಳನ್ನೊದಗಿಸುವ ಹಲವಾರು ಕವಿಚರಿತ್ರೆಗಳನ್ನು ಅನೇಕರು ರಚಿಸಿದ್ದಾರೆ. ಆದರೆ ಅವರ ಪೈಕಿ ಯಾರೊಬ್ಬರು ಈ ಮಹಾಕೃತಿಯ ಬಗ್ಗೆ ಪ್ರಸ್ತಾಪಿಸದೆ ಅದಕ್ಕೆ ಯುಕ್ತವಾದ ಸ್ಥಾನವನ್ನು ನೀಡದಿರುವುದು ತುಂಬಾ ಅಪಮಾನದ ವಿಚಾರವಾಗಿದೆ. ಕನ್ನಡದಲ್ಲಿ ಇಂಥ ಮಹತ್ತರವಾದ ಸಾಹಿತ್ಯ ಕೃತಿಯೊಂದು ಇದೆ ಎಂದು ಸೂಚಿಸುವುದೂ ಕೂಡ ಇಂದಿನ ಮಹಾ ಸಾಹಿತ್ಯತಿಹಾಸಕಾರರಿಗೆ ಸಹನವಾದ ವಿಚಾರವಾಗಿದೆ. ಇಂಥವರೆಲ್ಲರ ಸಾಮರ್ಥ್ಯ ಹಾಗೂ ವಿದ್ವತ್ತಿಗೆ ಸವಾಲಾಗಿ ಹಿಮಾಲಯದಂತೆ ಅಭೇದ್ಯವಾಗಿರುವ ಸಿರಿಭೂವಲಯದ ಜಾನತ್ಯವನ್ನು ಒಪ್ಪಿಕೊಳ್ಳುವುದೇ ನಮ್ಮ ವಿದ್ಯಾವಂತರ ವಿದ್ವಾಂಸರ ಆತ್ಮ ಗೌರವದ ಪ್ರಶೆಯಾಗಿರುವುದು ತೀರ ದುರದೃಷ್ಟಕರ ಸಂಗತಿಯಾಗಿದೆ.

ಇಂಥ ಮಹಾ ಗ್ರಂಥವನ್ನು ನಮ್ಮ ಕನ್ನಡಿಗರು ಇನ್ನೂ ಸರಿಯಾಗಿ ಕಣ್ಣು ಬಿಟ್ಟು ನೋಡುತ್ತಿಲ್ಲವಲ್ಲಾ. ಈ ಗ್ರಂಥವೊಂದಿದ್ದರೆ ಕನ್ನಡಿಗರು ಎಂದೆದಿಗೂ ಬಡತನ ಕಾಣಬೇಕಾಗಿಲ್ಲವಲ್ಲಾ ಎಂಬ ಕಳಕಳಿ ಅನಂತ ಸುಬ್ಬರಾಯರದು ಅಂಥ ಅದ್ಭುತ ಗ್ರಂಥವನ್ನು ಸಂಪೂರ್ಣವಾಗಿ ಅದ್ಯಾಯನ ಮಾಡಲು ಶಕ್ತರಾದ ಕನ್ನಡಿಗರು ಕೆಲವರಾದರೂ ಈ ಕನ್ನಡ ನಾಡಿನಲ್ಲಿ ಸಿಕ್ಕಿದರೆ ಸಾಕು ಕನ್ನಡವೂ ಕನ್ನಡಿಗರೂ, ಅಷ್ಟೇಕೆ? ಇಡೀ ಭಾರತ ಮತ್ತು ಪ್ರಪಂಚಕ್ಕೆ ಮಹೋಪಕಾರ ಮಾಡಬಹುದು ಎನ್ನುತ್ತಿದ್ದರು. ಅವರು ಅದಕ್ಕಾಗಿ ಅರ್ಹ ವ್ಯಕ್ತಿಗಳನ್ನು ಅರಸುತ್ತಿದ್ದರು. ನನಗೆ ತಿಳಿದಷ್ಟು ಯಾರಿಗಾದರೂ ಹೇಳಿಕೊಟ್ಟು ನಾನು ಹೋಗಬೇಕೆಂದಿದ್ದೇನೆ ಎಂದು ಹಗಲಿರುಳು ಹಂಬಲಿಸುತ್ತಿದ್ದರು.

ದಿವಂಗತ ಪಂಡಿತ ಎಲ್ಲಪ್ಪಶಾಸ್ತ್ರಗಳು ಈ ಮಹಾಗ್ರಂಥದ ಬಹುಭಾಗವನ್ನು ಕನ್ನಡದಲ್ಲಿ ಬರೆದಿಟ್ಟಿದ್ದಾರೆ. ದಿವಂಗತ ಕುರ್ಲಮಂಗಲ ಶ್ರೀ ಕಂಠಯ್ಯನವರೂ ಈ ಗ್ರಂಥದೊಳಗಿನ ಅಪಾರ ಸಾಹಿತ್ಯವನ್ನು ಸಂಶೋಧಿಸಿ ಬರೆದಿಟ್ಟಿದ್ದಾರೆ.

ಹೀಗೆ ಹಲವಾರು ಅಪೂರ್ವ ಸಾಧನೆಗಳನ್ನು ಯಶಸ್ವಿಯಾಗಿ ಸಾಧಿಸಿದ್ದ ಅನಂತ ಸುಬ್ಬರಾಯರ ಬಾಲ್ಯದ ದಿನಗಳಲ್ಲಿ ಆಶ್ರಯದಾತರಾಗಿದ್ದು ಇವರೆಗೆ ಅಪಾರ ನೆರವು ನೀಡಿದ್ದ ಇವರ ದೊಡ್ಡಮ್ಮ ಲಕ್ಷ್ಮೀದೇವಮ್ಮನವರಿಗೂ ಅವರ ಮಗ ಸುಬ್ಬಾರಾಯರ ಅವರ ಮಗಳು ಮಹಾಲಕ್ಷ್ಮೀನವರಿಗೂ ಇವರ ಬಗ್ಗೆ ಅಪಾರ ಅಭಿಮಾನ.

## ವ್ಯಕ್ತಿ ಚಿತ್ರಣ

ಸ್ಥೂಲವೂ ಅಲ್ಲದ ತೀರಾ ಕೃಶವೂ ಅಲ್ಲದ ಸುಮಾರು 5.6 ಅಡಿಗಳೆತ್ತರ ನಿಲುವು ತೀಕ್ಷ್ಣವಾದ ಕಣ್ಣುಗಳು ನೀಳವಾದ ಬಿಳಿಗೂದಲು ಸಡಿಲವಾದ ಖಾದಿ ಜುಬ್ಬಾ ಪದ್ದಿಪಂಚೆ ಹೆಗಲ ಮೇಲೊಂದು ಸಣ್ಣ ಅಂಗವಸ್ತ್ರ ಕೈಯಲ್ಲಿ ಒಂದು ಕೊಡೆ ಇದು ಇವರ ಸಾಮಾನ್ಯ ಉಡುಪು. ಆಡಿದ ಮಾತಿಗೆ ಕಟ್ಟು ಬೀಳುವಂತಹ ವ್ಯಕ್ತಿ ಮಹಾನ್ ಚೇತನ ಅನಂತ.

### ಅನುಬಂಧ-3

### ವಂಶಾವಳಿ

ವೇ. ಬ್ರಂ ಶ್ರೀ ಅನಂತನಾರಾಯಣ ಶಾಸ್ತ್ರಿ



ಕೇಶವಯ್ಯ (ತಂದೆ) ಸಾವಿತ್ರಮ್ಮ (ತಾಯಿ)
ಹಂದನ ಹಾಲು ಗ್ರಾಮ ಹಾಸನ



ಅನಂತಸುಬ್ಬರಾಯ (ದೊರೆಸ್ವಾಮಿ)



ರಾಜಮ್ಮ (ಪತ್ನಿ)





ಇಂದಿರಮ್ಮ (ಮಗಳು) ಕೇಶವಮೂರ್ತಿ ಸೂರ್ಯನಾರಾಯಣ ಮಂಜುನಾಥ್
ನಾಗರಾಜು (ಪತಿ)

ದಿವಂಗತ ಕೆ ಅನಂತಸುಬ್ಬರಾಯರದು ಬಹುಮುಖ ಪ್ರತಿಭೆಯ ವ್ಯಕ್ತಿತ್ವ ಮತ್ತು ಅಸಾಧಾರಣ ಪ್ರತಿಭೆಯ ಮೂಲಕ ಕನ್ನಡ ಲಿಪಿಯನ್ನುಳಿಸಿ ಬಾಳಿಸಿ ಬೆಳಗಿಸಿದ ಮಹಾನ್ ಚೇತನ.

## ಗ್ರಂಥಗಳ ವಿವರಣೆ (Bibliography)


1. *"ಸಿರಿಭೂವಲಯ" ಗ್ರಂಥದ ಭಾಗ-1 ಮತ್ತು 2*
   - ಪುಸ್ತಕಶಕ್ತಿ ಪ್ರಕಾಶನದ ಪ್ರಕಟಣೆಗಳು

2. *"ಸಿರಿಭೂವಲಯದ ಸ್ತಂಭಕಾವ್ಯಗಳು"*
   - ಡಿ॥ ಎಂ.ವೈ. ಧರ್ಮಪಾಲ್‌ರವರ

3. *"ಅನಂತ"*
   - ಸುಧಾರ್ಥಿ, ಹಾಸನ

4. ಅನಂತ ಸುಬ್ಬರಾಯರ ವಂಶಜರು ಕೊಟ್ಟ ಮಾಹಿತಿ.

5. ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ದೊರೆತ ಮಾಹಿತಿ

6. ಪ್ರೊ। ಪ್ರಣತಾರ್ತಿ ಹರನ್ ಸಂಗ್ರಹ ಹಾಗು "ಸಂಕೇತಿ" ಕೊಡುಗೆ.

7. ಹಲವಾರು ವೃತ್ತ ಪತ್ರಿಕೆಗಳಿಂದ ಲಭ್ಯವಾದ ಮಾಹಿತಿ.




ಸಿರಿ ಕುಮುದೇಂದು ಗುರುವೇ
ನಮಃ

ಇದು ದಿ|| ಕೆ. ಅನಂತಸುಬ್ಬರಾಯರ ಹಸ್ತಾಕ್ಷರ. ಇವರು ಸಿರಿಭೂವಲಯದಲ್ಲಿ ಕುಮುದೇಂದು ಮುನಿ ಬರೆದಿರುವ 'ಅಂಕಾಕ್ಷರ' ಪದ್ಧತಿಯ ಭಾಷೆಯು ಕನ್ನಡವಾಗಿದ್ದು, ಪ್ರಪಂಚದ ಅನೇಕ ಭಾಷೆಗಳಿಗೆ ಆಸರೆಯಾಗಿ ತನ್ನ ಒಡಲಿನಲ್ಲಿ ಇಂಬು ಕೊಡುವುದೆಂದು ಹೇಳುತ್ತಾರೆ. ಈ ಸಿರಿಭೂವಲಯ ಕಾವ್ಯದಲ್ಲಿ ಸಂಸ್ಕೃತ, ಪ್ರಾಕೃತ, ಕನ್ನಡವೆಂಬ ಮೂರರಿಂದ ಬೆಸೆದ ಸರಪಳಿಯಲ್ಲಿ ಉಳಿದ ಭಾಷೆಗಳನ್ನು ಬಹುಸುಗಂಧ ಪುಷ್ಪಹಾರದಂತೆ, ಪರಿಮಳ ದ್ರವ್ಯದಂತೆ ಎಲ್ಲಾ ಭಾಷಾಪುಷ್ಪದ್ರವ್ಯಗಳನ್ನು ಕನ್ನಡದ ದಾರದಲ್ಲಿ ಬಿಗಿದು ಕಟ್ಟಿದ್ದಾನೆಂದು ತಿಳಿಸುತ್ತಾರೆ. ಈ ಕಾವ್ಯದಲ್ಲಿ 718 ಭಾಷೆಗಳು ಅಡಗಿವೆ. ಕವಿ ತನ್ನ ಕಾವ್ಯ ಭಾಷೆಯನು, ಸರ್ವಭಾಷಾಮಯೀ ಸರಸ್ವತೀ ಎಂದು ಕರೆದಿದ್ದು, ಇದರಲ್ಲಿ ಹಳೆ- ಹೊಸ ಕಾವ್ಯಗಳನ್ನು ಬೆಸೆದು ಕಟ್ಟಿದ್ದಾನೆಂದೂ ಹೇಳುತ್ತಾರೆ. ಯಾರು ಎಷ್ಟು ಜಪಿಸಿದರೆ, ಚಿಂತಿಸಿದರೆ, ಅಷ್ಟಷ್ಟು ಸತ್ಫಲವನ್ನೀಯುವು ದೆಂದೂ, ನೂರು, ಸಾವಿರ, ಲಕ್ಷ, ಕೋಟಿಯ ಶ್ಲೋಕಾಂಶ ಸಾರವಾಗಿಸಿದ ಭೂವಲಯವೆಂದೂ ಇದರ ಮಹತ್ವವನ್ನು ಸಾರಿದ್ದಾರೆ.

ಇಂತಹ ಅಪೂರ್ವಗ್ರಂಥ ಸಿರಿಭೂವಲಯದ ಪ್ರಚಾರಕರು ಮತ್ತು ಸೇವಕ ದಿ|| ಕೆ. ಅನಂತ ಸುಬ್ಬರಾಯರು ತಮ್ಮ ಜೀವಮಾನದಲ್ಲಿ ಸಿರಿಭೂವಲಯದ ಬಗ್ಗೆ ಕೈಗೊಂಡ ಸಂಶೊಧನೆ, ಸಂಗ್ರಹಣೆ ಮತ್ತು ಪ್ರಚಾರಕಾರ್ಯ ಪ್ರಶಂಸನೀಯ. ಇದೊಂದು ಸಾಹಸವೇ ಸರಿ. ಸಿರಿಭೂವಲಯದ ಚಕ್ರಗಳ ಪಟಗಳನ್ನು ಜನರಿಗೆ ತೋರಿಸಿಕೊಂಡು ಮಾಡಿರುವ ಭಾಷಣಗಳು ಅಪೂರ್ವವಾದವು. ಈ ಭಾಷಣಗಳ ಸಾರವನ್ನು ಸಂಗ್ರಹಿಸಿ ಕು|| ಎನ್. ಪ್ರಭಾವತಿಯವರು ಪುಸ್ತಕ ರೂಪದಲ್ಲಿ ತರಲು ಬಹಳ ಶ್ರಮವಹಿಸಿದ್ದಾರೆ. ಈ ಹೊತ್ತಿಗೆಯನ್ನು ದಿ|| ಅನಂತಸುಬ್ಬರಾಯರ ಜನ್ಮಶತಮಾನದ ಸಂದರ್ಭದಲ್ಲಿ ಪುಸ್ತಕಶಕ್ತಿ ಪ್ರಕಾಶನವು ಹೊರತಂದಿರುವುದು ಶ್ಲಾಘನೀಯವಾಗಿದೆ. ಸಿರಿಭೂವಲಯ ಅಭಿಮಾನಿಗಳಿಗೆ ಓದುಗರಿಗೆ ಸಂಶೋಧಕರಿಗೆ ಈ ಹೊತ್ತಿಗೆ ಮಾರ್ಗ ದರ್ಶಕವಾಗುವುದರಲ್ಲಿ ಸಂಶಯವಿಲ್ಲ.

ಪ್ರೊ||. ನಾ. ಗೀತಾಚಾರ್ಯ
ಕನ್ನಡ ಪ್ರಾಧ್ಯಾಪಕರು,
ಶೇಷಾದ್ರಿಪುರಂ ಕಾಲೇಜು, ಬೆಂಗಳೂರು

ISBN 978-81-903572-7-2




Siribhoovalaya (A S Rao)